CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಮೇ ೬, ೨೦೦೪ (ವೈಶಾಖ ೧೬, ಶಕ ವರ್ಷ ೧೯೨೬) | ಸಂಚಿಕೆ ೧೯ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ, ಕೊಪ್ಪಳ**

**ಪ್ರಕರಣ ಸಂಖ್ಯೆ: ಕಾಅಕೊ:ಕಾನಪ: F/114/2004, ದಿನಾಂಕ: 7ನೇ ಏಪ್ರಿಲ್ 2004**

**ಪ್ರಕಟಣೆ**

**ಅರ್ಜಿದಾರರು:**

1) ಶ್ರೀಮತಿ ಲಕ್ಷ್ಮವ್ವ ಗಂಡ ದುರಗಪ್ಪ
2) ಹಿರೆನಿಂಗಪ್ಪ ತಂದೆ ಬೈಲಪ್ಪ
3) ಸಂಗಮ್ಮ ಗಂಡ ಹಿರೆನಿಂಗಪ್ಪ
   ಎಲ್ಲರು ಸಾ: ನರಿನಾಳ ತಾ: ಕುಷ್ಟಗಿ ಜಿ: ಕೊಪ್ಪಳ

**ವಿರುದ್ಧ**

**ಪ್ರತಿವಾದಿಗಳು:**

1) ಶ್ರೀ ಚಂದ್ರಶೇಖರ ಡಿ. ಕಾಳೆ
   ಗಾಡಿ ನಂ. ಕೆಎ 28/8470
   R/o ಗೊಡೆಬಾಳಿಮಾಲ ಬಿಜಾಪುರ
2) ಡಿವಿಜನಲ್ ಮ್ಯಾನೇಜರ್ ಓರಿಯಂಟಲ್
   ಇನ್ಸೂರೆನ್ಸ್ ಕಂ.ಲಿ. ಬಳ್ಳಾರಿ.

ಸಾರ್ವಜನಿಕ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಮೃತ ಶ್ರೀ ದುರಗಪ್ಪ ಎಂಬುವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿರುವಾಗ ದಿನಾಂಕ: 28.11.2003 ರಂದು ಕೆಲಸದಿಂದುಂಟಾದ ಅಪಘಾತದಿಂದ ಮೃತ:ಗಾಯ: ಹೊಂದಿರುತ್ತಾರೆ ಎಂದು ವಿವರಿಸುತ್ತಾ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ 1923 ರಡಿ ಪರಿಹಾರ ಧನಕ್ಕಾಗಿ ಕೋರಿ ಅವಲಂಬಿತ ವಾರಸುದಾರರೆಂದು ಹೇಳಿಕೊಂಡ ಮೃತರಾದ ಶ್ರೀ:ಶ್ರೀಮತಿ ಲಕ್ಷ್ಮವ್ವ ಹಾಗೂ ಇತರರು ಎಂಬುವವರು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ಅಥವಾ ತಾವೇನಾದರು ಅಥವಾ ತಾವೂ ಸಹ ಮೃತ ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾ ಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ಅಥವಾ ಸ್ಥಳೀಯ ದಿನಪತ್ರಿಕೆಯಲ್ಲಿ ಪ್ರಕಟಗೊಂಡ 30 ದಿನದೊಳಗಾಗಿ ಆಕ್ಷೇಪಣೆ ಅಥವಾ ಅರ್ಜಿ ಸಲ್ಲಿಸಬಹುದಾಗಿದೆ ಎಂದು ಮತ್ತು ಸದ್ರಿ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಅಥವಾ ಅರ್ಜಿ ಬಾರದಿದ್ದಲ್ಲಿ ಸದ್ರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನೇ ಮುಂದಿನ ವಿಚಾರಣೆಗಾಗಿ ತೆಗೆದುಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

ಪಿ.ಆರ್. 595

ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಕೊಪ್ಪಳ ಜಿಲ್ಲಾ, ಕೊಪ್ಪಳ.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ ಬಿಜಾಪೂರ ಇವರಲ್ಲಿ**
**ಮರಣ ಪ್ರಕರಣ ಸಂಖ್ಯೆ: ಕಾಅಬಿ-2:ಕಾನಪ:44/2004, ದಿನಾಂಕ: 31ನೇ ಮಾರ್ಚ್ 2004**

**ಪ್ರಕಟಣೆ**

**ಅರ್ಜಿದಾರರು:** **ವಿರುದ್ಧ** **ಪ್ರತಿವಾದಿಗಳು:**

ಶೀಲಾ ರಾಜು ಚವ್ಹಾಣ,
ವಾಸ: ಇಂಡಿ, ತಾ: ಇಂಡಿ, ಜಿಲ್ಲೆ: ಬಿಜಾಪೂರ
(ಹಾಗೂ ಇತರೆ 3 ಜನರು)

1. ಶಿವಾನಂದ ಬಸಪ್ಪಾ ಅಂಗಡಿ,
ವಾಸ: ಎಂ.ಜಿ. ರೋಡ್, ಮು: ಪೋಸ್ಟ್
ಮಾಹಾಲಿಂಗಪೂರ, ತಾ: ಮುದೋಳ, ಜಿಲ್ಲೆ:
ಬಾಗಲಕೋಟೆ (ಶಿವಾಜಿನಗರ, ಬೆಳಗಾವಿ)
2. ದಿ ಓರಿಯಂಟಲ್ ಇನ್ಸೂರೆನ್ಸ್ ಕಂ.ಲಿ.
ಮುದೋಳ ತಾ: ಜಿಲ್ಲೆ: ಬಿಜಾಪೂರ.

ಸಾರ್ವಜನಿಕ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಶ್ರೀ ರಾಜು ಚವ್ಹಾಣ ಎಂಬುವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ: 23.1.2004 ರಂದು ಮೃತ ಹೊಂದಿರುತ್ತಾರೆ ಎಂದು ಕಾರ್ಮಿಕರ ನಷ್ಟ ಪರಿಹಾರ ಕಾಯ್ದೆಯಡಿ ಪರಿಹಾರ ಧನಕ್ಕಾಗಿ ಕೋರಿ ಮೃತನ ಹೆಂಡತಿಯಾದ ನಾನು ಶ್ರೀಮತಿ ಶೀಲಾ ಎಂಬುವರು ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದ ಕಾರಣ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ತಾವೇನಾದರೂ ನಿಜವಾದ ಮೃತನ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳಲ್ಲಿ ಯಾವುದು ಮೊದಲು ಅದರೊಳಗೆ ಆಕ್ಷೇಪಣೆ ಅಥವಾ ಅರ್ಜಿಯನ್ನು ಸಲ್ಲಿಸಬಹುದಾಗಿದ್ದು ಯಾರಿಂದಲೂ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಂಡ ಅರ್ಜಿಯನ್ನೇ ಮುಂದಿನ ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ಮತ್ತು ನಂತರ ಬಂದ ಅರ್ಜಿಯನ್ನು ಸ್ವೀಕರಿಸಲಾಗುವುದಿಲ್ಲವೆಂದು ತಿಳಿಯುವುದು.

**ಜಿ. ಸಿದ್ದಲಿಂಗಪ್ಪ ಆಲೂರು**
ಪಿ.ಆರ್. 596 ಕಾರ್ಮಿಕ ಪರಿಹಾರ ಆಯುಕ್ತರು, ಉಪ ವಿಭಾಗ 2, ಬಿಜಾಪೂರ ಜಿಲ್ಲೆ, ಬಿಜಾಪೂರ.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ ಬಿಜಾಪೂರ ಇವರಲ್ಲಿ**
**ಮರಣ ಪ್ರಕರಣ ಸಂಖ್ಯೆ: ಕಾಅಬಿ:ಕಾನಪ:34/2004, ದಿನಾಂಕ: 22ನೇ ಮಾರ್ಚ್ 2004**

**ಪ್ರಕಟಣೆ**

**ಅರ್ಜಿದಾರರು:** **ವಿರುದ್ಧ** **ಪ್ರತಿವಾದಿಗಳು:**

ಶಿವಲಿಂಗಯ್ಯಾ ಸಿದ್ದರಾಮಯ್ಯಾ ಹಿರೇಮಠ
ವಾಸ: ಕುರಬರದಿನ್ನಿ, ತಾ: ಬಿ. ವಾಗೇವಾಡಿ
ಜಿಲ್ಲೆ: ಬಿಜಾಪೂರ (ಹಾಗೂ ಇತರೆ 3 ಜನರು)

1. ನಾತು ಮೀಸಾಜಿ ಜಾತ,
ವಾಸ: ಮೀಸಾ ತಾ: ಕೂಡಲ, ಜಿಲ್ಲೆ: ಬೀಲವಾಮ
2. ದಿ: ನ್ಯಾಶನಲ್ ಇನ್ಸೂರೆನ್ಸ್ ಕಂ.ಲಿ. ಬಿಜಾಪೂರ.

ಸಾರ್ವಜನಿಕ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಶ್ಯಾಂತಯ್ಯಾ ಎಂಬುವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ: 12.11.2003 ರಂದು ಮೃತ ಹೊಂದಿರುತ್ತಾರೆ ಎಂದು ಕಾರ್ಮಿಕರ ನಷ್ಟ ಪರಿಹಾರ ಕಾಯ್ದೆಯಡಿ ಪರಿಹಾರ ಧನಕ್ಕಾಗಿ ಕೋರಿ ಮೃತನ ಹೆಂಡತಿಯಾದ ನಾನು ಶ್ರೀಮತಿ ಶಿವಲಿಂಗಯ್ಯಾ ಎಂಬುವರು ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದ ಕಾರಣ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ತಾವೇನಾದರೂ ನಿಜವಾದ ಮೃತನ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳಲ್ಲಿ ಯಾವುದು ಮೊದಲು ಅದರೊಳಗೆ ಆಕ್ಷೇಪಣೆ ಅಥವಾ ಅರ್ಜಿಯನ್ನು ಸಲ್ಲಿಸಬಹುದಾಗಿದ್ದು ಯಾರಿಂದಲೂ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಂಡ ಅರ್ಜಿಯನ್ನೇ ಮುಂದಿನ ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ಮತ್ತು ನಂತರ ಬಂದ ಅರ್ಜಿಯನ್ನು ಸ್ವೀಕರಿಸಲಾಗುವುದಿಲ್ಲವೆಂದು ತಿಳಿಯುವುದು.

**ಜಿ. ಸಿದ್ದಲಿಂಗಪ್ಪ ಆಲೂರು**
ಪಿ.ಆರ್. 597 ಕಾರ್ಮಿಕ ಪರಿಹಾರ ಆಯುಕ್ತರು, ಉಪ ವಿಭಾಗ-2, ಬಿಜಾಪೂರ ಜಿಲ್ಲೆ, ಬಿಜಾಪೂರ.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ ಬಿಜಾಪೂರ ಇವರಲ್ಲಿ**
**ಮರಣ ಪ್ರಕರಣ ಸಂಖ್ಯೆ: ಕಾಅಬಿ-2:ಕಾನಪ:45/2004, ದಿನಾಂಕ: 2ನೇ ಏಪ್ರಿಲ್ 2004**

**ಪ್ರಕಟಣೆ**

**ಅರ್ಜಿದಾರರು:** **ವಿರುದ್ಧ** **ಪ್ರತಿವಾದಿಗಳು:**

1) ಸುರೇಶ ಪಾತ್ರಾ
2) ಕುಂತಲಾ ಪಾತ್ರಾ
3) ಸಂಧ್ಯಾ ಪಾತ್ರಾ
4) ಬಲಾಸಿನಿ ಪಾತ್ರ
ವಾಸ- ಜಲನಗರ, ಬಿಜಾಪೂರ

ಮ್ಯಾನೇಜಿಂಗ್ ಡೈರೆಕ್ಟರ್,
ನಾಗಾರ್ಜುನ ಕನಸ್ಟ್ರಕ್ಷನ್ ಕಂಪನಿ ಲಿ.
ಕುಮಾರ ಕೃಪಾ ರೋಡ್, ಕುಮಾರ ಪಾರ್ಕ್ ಇಸ್ಟ್,
ಬೆಂಗಳೂರು-560 001.

ಸಾರ್ವಜನಿಕ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಎಕದಾಸ ಪಾತ್ರಾ ಎಂಬುವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ: 14.3.2004 ರಂದು ಮೃತ ಹೊಂದಿರುತ್ತಾರೆ ಎಂದು ಕಾರ್ಮಿಕರ ನಷ್ಟ ಪರಿಹಾರ ಕಾಯ್ದೆಯಡಿ ಪರಿಹಾರ ಧನಕ್ಕಾಗಿ ಕೋರಿ ಮೃತನ ಹೆಂಡತಿಯಾದ ನಾನು ಶ್ರೀಮತಿ ಸುರೇಶ ಪಾತ್ರಾ ಎಂಬುವರು ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದ ಕಾರಣ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ತಾವೇನಾದರೂ ನಿಜವಾದ ಮೃತನ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳಲ್ಲಿ ಯಾವುದು ಮೊದಲು ಅದರೊಳಗೆ ಆಕ್ಷೇಪಣೆ ಅಥವಾ ಅರ್ಜಿಯನ್ನು ಸಲ್ಲಿಸಬಹುದಾಗಿದ್ದು ಯಾರಿಂದಲೂ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಂಡ ಅರ್ಜಿಯನ್ನೇ ಮುಂದಿನ ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ಮತ್ತು ನಂತರ ಬಂದ ಅರ್ಜಿಯನ್ನು ಸ್ವೀಕರಿಸಲಾಗುವುದಿಲ್ಲವೆಂದು ತಿಳಿಯುವುದು.

ಜಿ. ಸಿದ್ದಲಿಂಗಪ್ಪ ಆಲೂರು

ಪಿ.ಆರ್. 598 ಕಾರ್ಮಿಕ ಪರಿಹಾರ ಆಯುಕ್ತರು, ಉಪ ವಿಭಾಗ-2, ಬಿಜಾಪೂರ ಜಿಲ್ಲೆ, ಬಿಜಾಪೂರ.

**ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ, ಕೊಪ್ಪಳ**

**ಪ್ರಕರಣ ಸಂಖ್ಯೆ: ಕಾಅಕೊ:ಕಾನಪ:ಮ/112/2004, ದಿನಾಂಕ: 7ನೇ ಏಪ್ರಿಲ್ 2004**

**ಪ್ರಕಟಣೆ**

| **ಅರ್ಜಿದಾರರು:** | **ವಿರುದ್ಧ** | **ಪ್ರತಿವಾದಿಗಳು:** |
|---|---|---|
| 1) ಶ್ರೀ ಅಬ್ದುಲ ಮುನಾಫ ತಂದೆ ಉಮರಸಾಬ ಯರಗುಡಿ ಸಾ: ಲಕ್ಕುಂಡಿ ಹಾಲಿವಸ್ತಿ ಕೊಪ್ಪಳ<br>2) ಶ್ರೀಮತಿ ಮಮ್ತಾಜ ಬೇಗಂ ಗಂಡ ಅಬ್ದುಲ ಮುನಾಫ | | 1) ನಾಗಪ್ಪ ಸೊಪ್ಪಿನ ತಂದೆ ನೂರಂದಪ್ಪ ಟೆಂಪೋ ಮಾಲೀಕ ನಂ. 25/5628 ಸಾ: ಲಕ್ಕುಂಡಿ, ತಾ:ಜಿ: ಗದಗ<br>2) ದಿ ಡಿವಿಜನಲ್ ಮ್ಯಾನೇಜರ್, ನ್ಯಾಷನಲ್ ಇನ್ಸೂರೆನ್ಸ್ ಕಂ. ಲಿ. ಗುಲಬರ್ಗಾ. |

ಸಾರ್ವಜನಿಕ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಮೃತ ಶ್ರೀ:ಶ್ರೀಮತಿ ಇಮ್ತಿಯಾಜ ಎಂಬುವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿರುವಾಗ ದಿನಾಂಕ: 9.3.2004 ರಂದು ಕೆಲಸದಿಂದುಂಟಾದ ಅಪಘಾತದಿಂದ ಮೃತ ಹೊಂದಿರುತ್ತಾರೆ ಎಂದು ವಿವರಿಸುತ್ತಾ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ 1923 ರಡಿ ಪರಿಹಾರ ಧನಕ್ಕಾಗಿ ಕೋರಿ ಅವಲಂಬಿತ ವಾರಸುದಾರರೆಂದು ಶ್ರೀ ಅಬ್ದುಲ ಮುನಾಫ ಹಾಗೂ ಇತರರು ಎಂಬುವವರು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ಅಥವಾ ತಾವೇನಾದರು ಅಥವಾ ತಾವೂ ಸಹ ಮೃತ ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾ ಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ಅಥವಾ ಸ್ಥಳೀಯ ದಿನಪತ್ರಿಕೆಯಲ್ಲಿ ಪ್ರಕಟಗೊಂಡ 30 ದಿನದೊಳಗಾಗಿ ಆಕ್ಷೇಪಣೆ ಅಥವಾ ಅರ್ಜಿ ಸಲ್ಲಿಸಬಹುದಾಗಿದೆ ಎಂದು ಮತ್ತು ಸದ್ರಿ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಅಥವಾ ಅರ್ಜಿ ಬಾರದಿದ್ದಲ್ಲಿ ಸದ್ರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನೇ ಮುಂದಿನ ವಿಚಾರಣೆಗಾಗಿ ತೆಗೆದುಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,

ಪಿ.ಆರ್. 599 ಕೊಪ್ಪಳ ಜಿಲ್ಲಾ, ಕೊಪ್ಪಳ.

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ ಇವರ ನ್ಯಾಯಾಲಯ**

| **ಫಿರ್ಯಾದುದಾರರು:** | **ವಿರುದ್ಧ** | **ಪ್ರತಿವಾದಿಗಳು:** |
|---|---|---|
| ಆರಕ್ಷಕ ಸಹಾಯಕ ಉಪ ನಿರೀಕ್ಷಕರು,<br>ಶಿವಳ್ಳಿ ಪೊಲೀಸ್ ಠಾಣೆ, ಮಂಡ್ಯ ತಾ: | | ಆರೋಪಿಯು ಪತ್ತೆಯಾಗಬೇಕಾಗಿರುತ್ತದೆ. |

ದಿನಾಂಕ: 30.7.2003 ರಂದು ಬೆಳಿಗ್ಗೆ 9.30 ಗಂಟೆಯಲ್ಲಿ ಆರಕ್ಷಕ ಸಹಾಯಕ ಉಪ ನಿರೀಕ್ಷಕರು, ಶಿವಳ್ಳಿ ಪೊಲೀಸ್ ಠಾಣೆ, ಮಂಡ್ಯ ತಾ: ರವರು ಮಂಡ್ಯ ತಾಲ್ಲೂಕಿನ ಬಿಳುಗುಲಿ ಗ್ರಾಮದ ಬಸ್ ನಿಲ್ದಾಣದ ಬಳಿಯ ರಸ್ತೆಯಲ್ಲಿ ಬಜಾಜ್ ಸ್ಕೂಟರ್ ಸಂಖ್ಯೆ: ಕೆಎ-19/ಇ-2284 ರಲ್ಲಿ 8.640 ಲೀ. ಮದ್ಯವನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದ ಬಗ್ಗೆ ವಾಹನ ಮತ್ತು ಮದ್ಯವನ್ನು ಜಪ್ತು ಮಾಡಿ ಪ್ರಕರಣ ಸಂಖ್ಯೆ: 70/2003 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ ಕಲಂ 34 ರಂತೆ ಕ್ರಮ ಜರುಗಿಸಿರುತ್ತಾರೆ.

ವಶಪಡಿಸಿಕೊಂಡ ವಾಹನದ ಮಾಲೀಕತ್ವವನ್ನು ಕೋರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಇವರಿಗೆ ದಿ: 16.12.2003 ರಂದು ಪತ್ರ ಬರೆಯಲಾಗಿ, ಮಾಲೀಕತ್ವದ ಬಗ್ಗೆ ಈವರೆವಿಗೂ ಯಾವುದೇ ಮಾಹಿತಿ ನೀಡಿರುವುದಿಲ್ಲ.

ಈ ಪ್ರಕರಣದಲ್ಲಿ ಮಾದರಿ ತೆಗೆದ ಮದ್ಯದ ಸೀಸೆಗಳನ್ನು ರಾಸಾಯನಿಕ ಪ್ರಯೋಗಾಲಯಕ್ಕೆ ಕಳುಹಿಸಿ ವರದಿ ಪಡೆಯಲಾಗಿ, ಸದರಿ ಮದ್ಯವು ಮಾನವ ಸೇವನೆಗೆ ಯೋಗ್ಯವೆಂದೆ ರಾಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿರುತ್ತದೆ.

ಅಬಕಾರಿ ನಿರೀಕ್ಷಕರು, ಮಂಡ್ಯ ವಲಯ ರವರು ದಿನಾಂಕ: 10.12.2002 ರಂದು ವರದಿಯನ್ನು ಸಲ್ಲಿಸಿ, ವಾಹನ ಮತ್ತು ಮದ್ಯವು ತಮ್ಮದೆಂದು ಈವರೆವಿಗೂ ಯಾರೊಬ್ಬರೂ ಹಕ್ಕನ್ನು ಚಲಾಯಿಸಲು ಮುಂದೆ ಬಂದಿರುವುದಿಲ್ಲವೆಂದು ತಿಳಿಸುತ್ತಾ, ಸದರಿ ವಾಹನ ಮತ್ತು ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಕೋರಿರುತ್ತಾರೆ.

ಏತನ್ಮಧ್ಯೆ, ಈ ಪ್ರಾಧಿಕಾರದಿಂದ ಕರ್ನಾಟಕ ಅಬಕಾರಿ ಕಾಯ್ದೆಯಡಿಯಲ್ಲಿ ಮುಂದಿನ ಕ್ರಮ ಕೈಗೊಳ್ಳಲು ಸದರಿ ವಾಹನದ ಮಾಲೀಕರು ಯಾರಾದರೂ ಇದ್ದಲ್ಲಿ, ವಾಹನ ಮತ್ತು ಮದ್ಯವನ್ನು ತಮ್ಮದೆಂದು ಹಕ್ಕು ಚಲಾಯಿಸಲು ಅವಕಾಶ ನೀಡುವ ಸಲುವಾಗಿ ದಿನಾಂಕ: 19.1.2004 ರಂದು ಒಂದು ವಿವರವಾದ ಪ್ರಕಟಣೆಯನ್ನು ಹೊರಡಿಸಿದ್ದು, ದಿನಾಂಕ: 24.1.2004 ರಂದು ಸದರಿ ಪ್ರಕಟಣೆಯನ್ನು ಪ್ರಚಲಿತ ದಿನಪತ್ರಿಕೆಗಳಾದ ಸಂಯುಕ್ತ ಕರ್ನಾಟಕ ಮತ್ತು ಆಂದೋಲನಾ ದಿನಪತ್ರಿಕೆಯಲ್ಲಿ ಪ್ರಚಾರಪಡಿಸಿದ್ದು, ವಾಹನವು ಯಾರಿಗೆ ಸೇರಿದೆಯೋ ಅಂತಹವರು ಪ್ರಕಟಣೆಯಾದ (7) ದಿನಗಳೊಳಗಾಗಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಬೀತುಪಡಿಸತಕ್ಕದ್ದು. ಒಂದು ವೇಳೆ ನಿಗದಿತ ಅವಧಿಯೊಳಗೆ ಯಾರೊಬ್ಬರೂ ಹಕ್ಕನ್ನು ಚಲಾಯಿಸದಿದ್ದಲ್ಲಿ, ವಾಹನ ಮತ್ತು ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದಾಗಿ ಪ್ರಕಟಣೆಯನ್ನು ಸಹ ತಿಳಿಸಲಾಗಿತ್ತು.

ಈ ಪ್ರಕರಣದ ದಾಖಲಾತಿಗಳನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ ವಶಪಡಿಸಿಕೊಂಡ ಮದ್ಯವು ಮಾನವ ಸೇವನೆಗೆ ಯೋಗ್ಯವೆಂದು ರಾಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿರುತ್ತದೆ. ವಾಹನದಲ್ಲಿ ಯಾವುದೇ ಪರವಾನಗಿ ಇಲ್ಲದೆ ಅಕ್ರಮವಾಗಿ 8.640 ಲೀ. ಮದ್ಯವನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಕಂಡು ಬಂದಿರುತ್ತದೆ. ಈ ಬಗ್ಗೆ ಪ್ರತಿವಾದಿಯು ನಿರಾಕರಿಸಿರುವುದಿಲ್ಲ. ಮೊಕದ್ದಮೆ ದಾಖಲಾಗಿ ಸುಮಾರು 6 ತಿಂಗಳು ಕಳೆದರೂ, ವಾಹನ ಬಿಡುಗಡೆಗಾಗಿ ಯಾವುದೇ ಪ್ರಯತ್ನ ಪ್ರತಿವಾದಿಗಳ ಕಡೆಯಿಂದ ನಡೆದಿರುವುದಿಲ್ಲ. ವಾಹನದ ಮಾಲೀಕತ್ವ ನಿರೂಪಿಸಲು ಪತ್ರಿಕಾ ಪ್ರಕಟಣೆ ನೀಡಲಾಗಿದ್ದು, ಪ್ರಕಟಣೆಯಾಗಿ 7 ದಿನ ಕಳೆದರೂ ಸಂಬಂಧಪಟ್ಟವರು ಯಾವುದೇ ಪ್ರತಿಕ್ರಿಯೆ ನೀಡಿರುವುದಿಲ್ಲ. ಈ ಕಾರಣಗಳಿಂದ ವಾಹನ ಬಿಡುಗಡೆಗಾಗಿ ಯಾರೊಬ್ಬರೂ ಮುಂದೆ ಬರುವ ಸಾಧ್ಯತೆಗಳು ಕಡಿಮೆ ಇರುವುದರಿಂದ ಇನ್ನು ಮುಂದೆ ಕಾಲಾವಕಾಶ ನೀಡುವುದು ಅನವಶ್ಯಕವೆಂದು ಪರಿಗಣಿಸಿ ಕರ್ನಾಟಕ ಅಬ್ಕಾರಿ ಕಾಯಿದೆ ಕಲಂ 43(ಸಿ) ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಕಂಡು ಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/93/2003-04, ದಿನಾಂಕ: 7ನೇ ಫೆಬ್ರವರಿ 2004**

ಎಸ್. ಅನಂತು, ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ - ಆದ ನಾನು ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಆರಕ್ಷಕ ಸಹಾಯಕ ಉಪ ನಿರೀಕ್ಷಕರು, ಶಿವಳ್ಳಿ ಪೊಲೀಸ್ ಠಾಣೆ, ಮಂಡ್ಯ ತಾ: ರವರ ಪ್ರ.ಮಾ.ವ. ಸಂಖ್ಯೆ: 70/2003, ದಿನಾಂಕ: 30.7.2003 ರಲ್ಲಿ ವಶಪಡಿಸಿಕೊಂಡ ವಾಹನ ಹೀರೋಹೊಂಡಾ ಸಂಖ್ಯೆ: ಕೆಎ-19/ಇ-2284 ನ್ನು ಮತ್ತು ಮದ್ಯವನ್ನು (ಸ್ಯಾಂಪಲ್ ಬಾಟಲ್ ಹೊರತುಪಡಿಸಿ) ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43(ಸಿ) ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುತ್ತದೆ.

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು,
ಮಂಡ್ಯ ಜಿಲ್ಲೆ, ಮಂಡ್ಯ.

ಪಿ.ಆರ್. 600

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ ಇವರ ನ್ಯಾಯಾಲಯ**

| **ಪಿರ್ಯಾದುದಾರರು:** | **ವಿರುದ್ಧ** | **ಪ್ರತಿವಾದಿಗಳು:** |
|---|---|---|
| ಅಬಕಾರಿ ಉಪ ನಿರೀಕ್ಷಕರು,<br>ಉಪ ವಿಭಾಗ, ಮಂಡ್ಯ | | ರುದ್ರೇಶ್ ಬಿನ್ ಲೇಟ್ ಸೂರಯಪ್ಪ, ವಿದ್ಯಾನಗರ,<br>ಹಿರೆಕೆರೂರು, ಹಿರೇಕೆರೆ ತಾ:, ಹಾವೇರಿ ಜಿಲ್ಲೆ.<br>ಜೆ. ಮುಸ್ತಾಕ್ ಅಹ್ಮದ್, 301, ರೂಪಾ<br>ಅಪಾರ್ಟ್‌ಮೆಂಟ್, ಆದರ್ಶ ನಗರ, ಹುಬ್ಬಳ್ಳಿ. |

ದಿನಾಂಕ: 25.1.2003 ರಂದು ರಾತ್ರಿ 10.00 ಗಂಟೆಯಲ್ಲಿ ಅಬಕಾರಿ ಉಪ ನಿರೀಕ್ಷಕರು, ಮಂಡ್ಯ ಉಪ ವಿಭಾಗ - ರವರು ಮಂಡ್ಯ ಸಿಟಿ ಮೈಸೂರು ಸಕ್ಕರೆ ಕಂಪನಿ ಸರ್ಕಲ್ ಹತ್ತಿರ ಅಶೋಕಾ ಲೈ ಲ್ಯಾಂಡ್ ಟ್ಯಾಂಕರ್ ಸಂಖ್ಯೆ: ಕೆಎ-25/5040 ರಲ್ಲಿ 18.000 ಲೀ. ತೆರಿಗೆ ರಹಿತ ಮದ್ಯಸಾರವನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದ ಬಗ್ಗೆ ವಾಹನ ಮತ್ತು ಮದ್ಯಸಾರವನ್ನು ಜಪ್ತು ಮಾಡಿ ಪ್ರಕರಣ ಸಂಖ್ಯೆ: 38/2002-03 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ ಕಲಂ 32, 34, 38(ಎ), 43 ಮತ್ತು 43(ಎ) ರಂತೆ ಕ್ರಮ ಜರುಗಿಸಿರುತ್ತಾರೆ.

ಜೆ. ಮುಸ್ತಾಕ್ ಅಹ್ಮದ್ - ಇವರ ಪಿಎ ಹೋಲ್ಡರ್‌ರವರಾದ ರಾಘವೇಂದ್ರ ಬಿನ್ ಕೆ. ಭೀಮಣ್ಣ, ನಂ. 57, ಮೇಟಗಳ್ಳಿ ಬಡಾವಣೆ, ಕೆ.ಆರ್.ಎಸ್. ರಸ್ತೆ, ಮೈಸೂರು - ಇವರು ವಕೀಲರ ಮುಖೇನ ದಿ: 3.2.2003 ರಂದು ಮನವಿಯನ್ನು ಸಲ್ಲಿಸಿ, ವಾಹನಕ್ಕೆ ಸೂಕ್ತ ಭದ್ರತೆ ಪಡೆದು, ತಾತ್ಕಾಲಿಕವಾಗಿ ತನ್ನ ವಶಕ್ಕೆ ಬಿಡುಗಡೆ ಮಾಡಲು ಕೋರಿರುತ್ತಾರೆ.

ವಶಪಡಿಸಿಕೊಂಡ ವಾಹನದ ಮಾಲೀಕತ್ವವನ್ನು ಕೋರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಹುಬ್ಬಳ್ಳಿ - ಇವರಿಗೆ ದಿ: 16.12.2003 ರಂದು ಪತ್ರ ಬರೆಯಲಾಗಿದೆ.

ಈ ಪ್ರಕರಣದಲ್ಲಿ ಮಾದರಿ ತೆಗೆದ ಮದ್ಯಸಾರದ ಸೀಸೆಗಳನ್ನು ರಾಸಾಯನಿಕ ಪ್ರಯೋಗಾಲಯಕ್ಕೆ ಕಳುಹಿಸಿ ವರದಿ ಪಡೆಯಲಾಗಿ, ಸದರಿ ಮದ್ಯಸಾರವು "It is fit for potable purpose" ಎಂದು ರಾಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿರುತ್ತದೆ.

ಈ ಪ್ರಾಧಿಕಾರದಿಂದ ದಿ: 16.2.2003 ರಂದು ಆರೋಪಿಗೆ ಮತ್ತು ವಾಹನ ಮಾಲೀಕರಿಗೆ ವಾಹನ ಮತ್ತು ಮದ್ಯಸಾರವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43(ಬಿ) ಅಡಿಯಲ್ಲಿ ಕಾರಣ ಕೇಳುವ ನೋಟೀಸನ್ನು ನೋಂದಣಿ ಅಂಚೆ ಮೂಲಕ ಕಳುಹಿಸಲಾಗಿ ವಿಳಾಸವಿಲ್ಲವೆಂಬ ಷರಾದೊಂದಿಗೆ ಅಂಚೆ ಇಲಾಖೆಯವರು ಈ ಪ್ರಾಧಿಕಾರಕ್ಕೆ ಹಿಂದಿರುಗಿಸಿದ್ದಾರೆ.

ಅಬಕಾರಿ ನಿರೀಕ್ಷಕರು, ಮಂಡ್ಯ ವಲಯ ರವರು ದಿನಾಂಕ: 7.2.2004 ರಂದು ವರದಿಯನ್ನು ಸಲ್ಲಿಸಿ, ವಾಹನ ಮತ್ತು ಮದ್ಯಸಾರವನ್ನು ತಮ್ಮದೆಂದು ಈವರೆವಿಗೂ ಯಾರೊಬ್ಬರೂ ಹಕ್ಕನ್ನು ಚಲಾಯಿಸಲು ಮುಂದೆ ಬಂದಿರುವುದಿಲ್ಲವೆಂದು ತಿಳಿಸುತ್ತಾ, ಸದರಿ ವಾಹನ ಮತ್ತು ಮದ್ಯಸಾರವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ದಾಖಲಾತಿಗಳನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ ವಶಪಡಿಸಿಕೊಂಡ ಸದರಿ ಮದ್ಯಸಾರವು "It is fit for potable purpose" ಎಂದು ರಾಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿರುತ್ತದೆ. ವಾಹನದಲ್ಲಿ ಯಾವುದೇ ಪರವಾನಗಿ ಇಲ್ಲದೆ ಅಕ್ರಮವಾಗಿ 18.000 ಲೀ. ಮದ್ಯಸಾರವನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಕಂಡು ಬಂದಿರುತ್ತದೆ. ಈ ಬಗ್ಗೆ ಪ್ರತಿವಾದಿಯು ನಿರಾಕರಿಸಿರುವುದಿಲ್ಲ. ಮೊಕದ್ದಮೆ ದಾಖಲಾಗಿ ಸುಮಾರು 6 ತಿಂಗಳು ಕಳೆದರೂ, ವಾಹನ ಬಿಡುಗಡೆಗಾಗಿ ಯಾವುದೇ ಪ್ರಯತ್ನ ಪ್ರತಿವಾದಿಗಳ ಕಡೆಯಿಂದ ನಡೆದಿರುವುದಿಲ್ಲ. ಈ ಕಾರಣಗಳಿಂದ ವಾಹನ ಬಿಡುಗಡೆಗಾಗಿ ಯಾರೊಬ್ಬರೂ ಮುಂದೆ ಬರುವ ಸಾಧ್ಯತೆಗಳು ಕಡಿಮೆ ಇರುವುದರಿಂದ ಇನ್ನು ಮುಂದೆ ಕಾಲಾವಕಾಶ ನೀಡುವುದು ಅನವಶ್ಯಕವೆಂದು ಪರಿಗಣಿಸಿ ಕರ್ನಾಟಕ ಅಬ್ಕಾರಿ ಕಾಯಿದೆ ಕಲಂ 43(ಸಿ) ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಕಂಡು ಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/485/2002-03, ದಿನಾಂಕ: 10ನೇ ಮಾರ್ಚ್ 2004**

ಎಸ್. ಅನಂತು, ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ - ಆದ ನಾನು ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಅಬಕಾರಿ ಉಪ ನಿರೀಕ್ಷಕರು, ಮಂಡ್ಯ ಉಪ ವಿಭಾಗ ರವರ ಪ್ರ.ಮಾ.ವ. ಸಂಖ್ಯೆ: 38/2002-03, ದಿನಾಂಕ: 25.1.2003 ರಲ್ಲಿ ವಶಪಡಿಸಿಕೊಂಡ ವಾಹನ ಅಶೋಕ ಲೈ ಲ್ಯಾಂಡ್ ಟ್ಯಾಂಕರ್ ಸಂಖ್ಯೆ: ಕೆಎ-25/5040 (ಇಂಜಿನ್ ಸಂಖ್ಯೆ: ಡಬ್ಲ್ಯುಇ-183603, ಚಾಸ್ಸಿ ಸಂ: ಜೇಇಡಬ್ಲ್ಯೂ-301145) ನ್ನು ಮತ್ತು ಮದ್ಯಸಾರವನ್ನು (ಸ್ಯಾಂಪಲ್ ಬಾಟಲ್ ಹೊರತುಪಡಿಸಿ) ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43(ಸಿ) ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುತ್ತದೆ.

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು,
ಪಿ.ಆರ್. 601 ಮಂಡ್ಯ ಜಿಲ್ಲೆ, ಮಂಡ್ಯ.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್**
**ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರುರವರ ನ್ಯಾಯಾಲಯದಲ್ಲಿ**
**ನಂ. ಎಸ್‌ಡಿಕೆ: 1182:ಡಿಟಿಸಿಆರ್: 98-99**

**ಉಪಸ್ಥಿತರು:** ಗೋವಿಂದಪ್ಪ, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸ್ಶೈಜ್, ದ.ಕ. ಜಿಲ್ಲೆ, ಮಂಗಳೂರು.

| **ಫಿರ್ಯಾದುದಾರರು:** | **ವಿರುದ್ಧ** | **ಆರೋಪಿಗಳು:** |
|---|---|---|
| ಪೊಲೀಸು ಉಪ ನಿರೀಕ್ಷಕರು, ಪಣಂಬೂರು ಪೊಲೀಸು ಠಾಣೆ, ಪಣಂಬೂರು. | | 1. ರಾಧಕೃಷ್ಣನ್ ಕೆ. ಅಡ್ಯಂತಾಯ ಬಿನ್ ಸದಾಶಿವ ಅಡ್ಯಂತಾಯ, ಕೆ.ಎ. ಶೆಣೈ ಕಂಪೌಂಡ್, ದರ್ಬೆ, ಪುತ್ತೂರು. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 4.5.99 ರಂದು ಮಧ್ಯಾಹ್ನ 12.45ಕ್ಕೆ ಆರಕ್ಷಕ ನಿರೀಕ್ಷಕರು, ಪಣಂಬೂರು ವೃತ್ತ ಇವರು ದೊರೆತ ಖಚಿತ ವರ್ತಮಾನದ ಮೇರೆಗೆ ತಮ್ಮ ಸಿಬ್ಬಂದಿಗಳೊಂದಿಗೆ ಹಾಗೂ ಪಂಚರೊಂದಿಗೆ ಪಣಂಬೂರು ಸಿ.ಐ.ಎಸ್.ಎಫ್. ಕಾಲೋನಿ ರಸ್ತೆಯಲ್ಲಿ ರಸ್ತೆಗಾವಲು ನಡೆಸುತ್ತಿರುವಾಗ ಅಬ್ಸರ್‌ವೇಟರ್ ರಸ್ತೆ ಕಡೆಯಿಂದ ಒಂದು ಲಾರಿ ಬರುತ್ತಿರುವುದನ್ನು ಕಂಡು ಅದನ್ನು ತಡೆದು ನಿಲ್ಲಿಸಿ ಪರಿಶೀಲಿಸಲಾಗಿ ಲಾರಿಯ ಸಂಖ್ಯೆ: ಕೆಎ-2975 ಆಗಿದ್ದು ಸಿಬ್ಬಂದಿಯವರ ಸಹಾಯದಿಂದ ಟಾರ್ಪಾಲನ್ನು ಸರಿಸಿ ನೋಡಲಾಗಿ ಲಾರಿಯಲ್ಲಿ ಬಿಳಿಬಣ್ಣದ ಕ್ಯಾನುಗಳಿದ್ದು ಅವುಗಳಲ್ಲಿ ದ್ರಾವಣವಿದ್ದು ಪರಿಶೀಲನೆ ಮಾಡಲಾಗಿ ಸ್ಪಿರಿಟ್ ಇರುವುದು ಕಂಡುಬಂದಿದ್ದು, ಈ ಬಗ್ಗೆ ಲಾರಿಯಲ್ಲಿದ್ದ ಚಾಲಕನಲ್ಲಿ ವಿಚಾರಿಸಲಾಗಿ ಸದ್ರಿ ಕ್ಯಾನುಗಳಲ್ಲಿ ಸ್ಪಿರಿಟ್ ಇದ್ದು ಸ್ಪಿರಿಟ್ಟಿನ ಸಾಗಣೆಗೆ ಯಾವುದೇ ರಹದಾರಿಯಿಲ್ಲವೆಂದು ಸ್ಪಿರಿಟನ್ನು ಪುತ್ತೂರು ಕಡೆಗೆ ಸಾಗಿಸುತ್ತಿರುವುದಾಗಿ ತಿಳಿಸಿರುತ್ತಾರೆ. ಸ್ಪಿರಿಟ್ ಸಾಗಣೆ ಬಗ್ಗೆ ಯಾವುದೇ ದಾಖಲೆ ಪತ್ರಗಳು ಇಲ್ಲದಿರುವುದರಿಂದ ಲಾರಿಯಲ್ಲಿದ್ದ ಸ್ವತ್ತುಗಳನ್ನು ಪಂಚರ ಸಮಕ್ಷಮ ಅಜಮಾಯಿಸಲಾಗಿ ಲಾರಿಯಲ್ಲಿ 35 ಲೀಟರು ಸಾಮರ್ಥ್ಯದ 115 ಕ್ಯಾನುಗಳು ಇದ್ದು, ಈ ಪೈಕಿ 114 ಕ್ಯಾನುಗಳಲ್ಲಿ ತಲಾ 35 ಲೀಟರು ಸ್ಪಿರಿಟ್ ಇದ್ದು ಒಂದು ಕ್ಯಾನಿನಲ್ಲಿ 10 ಲೀಟರು ಸ್ಪಿರಿಟ್ ಇರುವುದು ಕಂಡುಬಂತು. ಈ ಕ್ಯಾನುಗಳಿಗೆ 1 ರಿಂದ 115 ರವರೆಗೆ ಕ್ರಮ ಸಂಖ್ಯೆಗಳನ್ನು ನೀಡಿ 1 ಮತ್ತು 2ನೇ ಕ್ಯಾನುಗಳಿಂದ ಸ್ಯಾಂಪಲ್‌ಗಾಗಿ ತಲಾ 750 ಮಿಲಿ ಸ್ಪಿರಿಟನ್ನು 2 ಬಾಟ್ಲಿಗಳಲ್ಲಿ ತೆಗೆದು ಬಾಟ್ಲಿಗಳಿಗೆ ಬಟ್ಟೆದಾರ ಕಟ್ಟಿ ಇಲಾಖೆಯ ಸೀಲಿನಿಂದ ಸೀಲು ಮಾಡಲಾಯಿತು. ಸದ್ರಿ ಕ್ಯಾನುಗಳಲ್ಲಿ ಒಟ್ಟು 4000 ಲೀಟರು ಮದ್ಯಸಾರ ಇರುವುದು ಕಂಡುಬಂದಿದ್ದು ಇದು ಅಕ್ರಮ ಮದ್ಯಸಾರ ಸಾಗಣೆಯಾದ್ದರಿಂದ ಮುಂದಿನ ನಡವಳಿಕೆಯ ಬಗ್ಗೆ ಸ್ವತ್ತುಗಳನ್ನು ಲಾರಿಯ ಸಮೇತ ವಶಕ್ಕೆ ತೆಗೆದುಕೊಂಡು ಲಾರಿ ಚಾಲಕ ಚಾರ್ಲ್ಸ್ ಡಿಸೋಜ ಹಾಗೂ ಲಾರಿಯಲ್ಲಿದ್ದ ರಮೇಶ, ಗಿರಿಯ ಮತ್ತು ರಾಜೇಶ್ ಎಂಬುವರನ್ನು ದಸ್ತಗಿರಿ ಮಾಡಿರುತ್ತಾರೆ. ಮತ್ತು ಮೇಲ್ಕಂಡ ಸ್ವಾಧೀನಪಡಿಸಿದ ಲಾರಿ ಸಂ: ಕೆಎ-21-2975ನ್ನು ಮದ್ಯಸಾರ 115 ಕ್ಯಾನುಗಳು ಹಾಗೂ 2 ಮಾದರಿ ಶೀಷೆಗಳು ಹಾಗೂ 4 ಜನ ಆರೋಪಿತರುಗಳನ್ನು ಠಾಣಾಧಿಕಾರಿ, ಪಣಂಬೂರು ಠಾಣೆ ಇವರಿಗೆ ಮುಂದಿನ ಸೂಕ್ತ ಕ್ರಮಕ್ಕಾಗಿ ಹಸ್ತಾಂತರಿಸಿರುತ್ತಾರೆ. ನಂತರ ಠಾಣಾಧಿಕಾರಿ, ಪಣಂಬೂರು ಠಾಣೆ ಇವರು ಇದು ಅಬಕಾರಿ ಕಾಯ್ದೆ ಕಲಂ 32, 34 ಹಾಗೂ 35 ರಂತೆ ಅಪರಾಧವಾಗಿರುವುದರಿಂದ ಪ್ರಕರಣ ಸಂ: 55/99 ದಿ: 4.5.99 ರ ಮೂಲಕ ಪ್ರಕರಣವನ್ನು ದಾಖಲಿಸಿ ಪ್ರಕರಣವನ್ನು ಮುಂದಿನ ನಡವಳಿಕೆಗಾಗಿ ಈ ಪ್ರಾಧಿಕಾರದ ಅನುಮತಿಯ ಪ್ರಕಾರ ಅಬಕಾರಿ ನಿರೀಕ್ಷಕರು, ಕೂಳೂರು ಇವರಿಗೆ ಹಸ್ತಾಂತರಿಸಿರುತ್ತಾರೆ.

ಈ ಪ್ರಕರಣದಲ್ಲಿ ಜಪ್ತುಪಡಿಸಲಾಗಿರುವ ವಾಹನದ ಮಾಲೀಕರಾದ ರಾಧಾಕೃಷ್ಣ ಅಡ್ಯಂತಾಯ ಇವರು ದಿ: 22.7.99 ರಂದು ಈ ಪ್ರಾಧಿಕಾರಕ್ಕೆ ತಮ್ಮ ವಕೀಲರ ಮೂಲಕ ಅರ್ಜಿಯನ್ನು ಸಲ್ಲಿಸಿ ವಾಹನದ ಮಧ್ಯಂತರ ಬಿಡುಗಡೆಯನ್ನು ಕೋರಿರುತ್ತಾರೆ. ಸದ್ರಿ ಅರ್ಜಿಯನ್ನು ತಿರಸ್ಕರಿಸಿ ಪ್ರಾಧಿಕಾರವು ದಿ: 29.6.99 ರಂದು ಆದೇಶ ನೀಡಿರುತ್ತದೆ. ಈ ಪ್ರಾಧಿಕಾರವು ನೀಡಿದ ಆದೇಶದ ವಿರುದ್ಧ ಜಿಲ್ಲಾ ಸತ್ರ

ನ್ಯಾಯಾಲಯದಲ್ಲಿ ಕ್ರಿಮಿನಲ್ ಅಪೀಲ್ ಸಂ: 144/99 ಮೂಲಕ ದಿ: 11.10.99 ರಂದು ಮೇಲ್ಮನವಿ ಸಲ್ಲಿಸಿದ್ದು ಮಾನ್ಯ ಸತ್ರ ನ್ಯಾಯಾಲಯವು ವಾಹನದ ಮೌಲ್ಯಕ್ಕೆ ವಸೂಲಿ ಮಾಡಲಾಗದ ಬ್ಯಾಂಕ್ ಗ್ಯಾರೆಂಟಿ ಮತ್ತು ಅಷ್ಟೇ ಮೊತ್ತಕ್ಕೆ ಇಂಡೆಮ್ನಿಟಿ ಬಾಂಡನ್ನು ಪಡೆದು ಹಾಗೂ ಇನ್ನಿತರ ಷರತ್ತುಗಳೊಂದಿಗೆ ವಾಹನವನ್ನು ವಾಹನ ಮಾಲೀಕರ ಮಧ್ಯಂತರ ವಶಕ್ಕೆ ನೀಡಲು ಆದೇಶವನ್ನು ದಿ: 18.11.99 ರಂದು ನೀಡಿರುತ್ತದೆ. ವಾಹನದ ಮೌಲ್ಯವನ್ನು ಸಾರಿಗೆ ಅಧಿಕಾರಿಗಳು ರೂ. 1,60,000/- ಗಳಿಗೆ ನಿರ್ಧರಿಸಿದ್ದು, ಪ್ರಾಧಿಕಾರವು 1,60,000/- ಗಳ ಬ್ಯಾಂಕ್ ಗ್ಯಾರೆಂಟಿ ಹಾಗೂ ಅಷ್ಟೇ ಮೊತ್ತದ ಇಂಡೆಮ್ನಿಟಿ ಬಾಂಡ್ ಪಡೆದು ವಾಹನವನ್ನು ದಿ: 8.12.99 ರಂದು ವಾಹನ ಮಾಲೀಕರ ಮಧ್ಯಂತರ ವಶಕ್ಕೆ ನೀಡಲಾಗಿರುತ್ತದೆ. ದಿ: 6.9.99 ರಂದು ವಾಹನ ಮಾಲೀಕರಿಗೆ ಕಾರಣ ಕೇಳಿ ನೋಟೀಸು ನೀಡಲಾಗಿ ಸದ್ರಿ ಕಾರಣ ಕೇಳಿ ನೀಡಲಾಗಿದ್ದ ನೋಟೀಸಿಗೆ ವಾಹನ ಮಾಲೀಕರು ದಿ: 29.9.99 ರಂದು ಉತ್ತರ ನೀಡಿರುತ್ತಾರೆ.

ನಂತರ ಪ್ರಕರಣದ ವಿಚಾರಣೆಯನ್ನು ಪ್ರಾರಂಭಿಸಿ ಸರ್ಕಾರದ ಅಭಿಯೋಜನೆಯ ಪರ ಐದು ಸಾಕ್ಷಿಗಳನ್ನು ಪ್ರತಿ ರಕ್ಷಾ ಪರ ಒಂದು ಸಾಕ್ಷಿಯನ್ನು ವಿಚಾರಣೆಗೆ ಒಳಪಡಿಸಿ ಅವರುಗಳ ಸಾಕ್ಷಿ ಹೇಳಿಕೆಯನ್ನು ಪಡೆಯಲಾಗಿದೆ. ಈ ಪ್ರಕರಣದಲ್ಲಿ ಸರ್ಕಾರದ ಪರ ಹಾಗೂ ವಾಹನ ಮಾಲೀಕರ ಪರ ಸಲ್ಲಿಸಲಾಗಿರುವ ಸಾಕ್ಷ್ಯಾಧಾರಗಳಿಂದ ಈ ಕೆಳಗಿನ ವಿವಾದಾಂಶಗಳನ್ನು ತೀರ್ಮಾನಿಸಬೇಕಾಗಿರುವುದು ಅಗತ್ಯವಾಗಿದ್ದು ಪರಿಶೀಲನಾಂಶಗಳು ಈ ಕೆಳಗಿನಂತಿರುತ್ತವೆ.

1. ದಿನಾಂಕ: 4.5.99 ರಂದು ವಾಹನ ಲಾರಿ ಸಂ: ಕೆಎ-21-2975 ರಲ್ಲಿ ಅಕ್ರಮವಾಗಿ ಮದ್ಯಸಾರ ಸಾಗಾಣಿ ಮಾಡಲಾಗಿತ್ತೇ?
2. ವಶಪಡಿಸಿಕೊಂಡಿರುವ ವಾಹನ ಮಾಲೀಕ ತಾನೆಂದು ತನಗೆ ತಿಳಿಯದೇ ವಾಹನವನ್ನು ಅಕ್ರಮ ಸಾಗಾಣಿಕೆಗೆ ಉಪಯೋಗಿಸಲ್ಪಟ್ಟಿತ್ತು ಎಂಬುದನ್ನು ಅರ್ಜಿದಾರರು ಸಾಬೀತುಪಡಿಸಿದ್ದಾರೆಯೇ?
3. ಜಪ್ತುಪಡಿಸಲಾಗಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಈ ಮೇಲೆ ತಿಳಿಸಿರುವ ಪರಿಶೀಲನಾಂಶಗಳನ್ನು ಲಭ್ಯವಿರುವ ಸಾಕ್ಷ್ಯದ ಆಧಾರದ ಮೇಲೆ ಈ ಕೆಳಗಿನಂತೆ ಉತ್ತರಿಸಿರುತ್ತೇನೆ.

1. ಒಂದನೇ ಅಂಶವನ್ನು ಗುಣಾತ್ಮಕವಾಗಿ ಹೌದು ಎಂದೂ, ಎರಡನೇ ಅಂಶವನ್ನು ನಕಾರಾತ್ಮಕವಾಗಿ ಇಲ್ಲ ಎಂದೂ ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸಾ-1:**

ಶ್ರೀ ಮೋನಪ್ಪ ಗೌಡ, ಆರಕ್ಷಕ ಸಹಾಯಕ ಉಪ ನಿರೀಕ್ಷಕರು, ಪಣಂಬೂರು ಆರಕ್ಷಕ ಠಾಣೆ ಇವರು ಈ ಪ್ರಾಧಿಕಾರದ ಮುಂದೆ ದಿನಾಂಕ: 29.3.2001 ರಂದು ಹಾಜರಾಗಿ ತಮ್ಮ ಸಾಕ್ಷ್ಯ ನೀಡಿರುತ್ತಾರೆ. ತಾನು ದಿ: 4.5.99 ರಂದು ಪಣಂಬೂರು ಠಾಣಾ ಪ್ರಭಾರದಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಆ ದಿನದಂದು ಪಣಂಬೂರು ಪೊಲೀಸು ವೃತ್ತ ನಿರೀಕ್ಷಕರು ಠಾಣೆಗೆ ಬಂದು ನೀಡಿದ ಲಿಖಿತ ವರದಿಯನ್ನು ಅನುಸರಿಸಿ ಠಾಣೆ ಮೊಕದ್ದಮೆ ಸಂಖ್ಯೆ: 55/99 ದಿ: 4.5.99ರ ಮೂಲಕ ಅಬಕಾರಿ ಕಾಯ್ದೆ ಕಲಂ 32, 34 ಮತ್ತು 35 ರ ಅನ್ವಯ ಮೊಕದ್ದಮೆಯನ್ನು ದಾಖಲುಮಾಡಿ ಪ್ರಥಮ ಮಾಹಿತಿ ವರದಿಯನ್ನು ನ್ಯಾಯಾಲಯಕ್ಕೂ ಪ್ರತಿಗಳನ್ನು ಮೇಲಾಧಿಕಾರಿಗಳಿಗೂ ಕಳುಹಿಸಿಕೊಟ್ಟಿರುತ್ತೇನೆ. ಹಾಜರುಪಡಿಸಿದ ಸ್ವತ್ತುಗಳನ್ನು ಸ್ವತ್ತು ಪಟ್ಟಿ 45 ರಂತೆ ನ್ಯಾಯಾಲಯಕ್ಕೆ ಸಲ್ಲಿಸಿರುತ್ತೇನೆ. ಹಾಗೂ ಅಪರಾಧಿಗಳನ್ನು ನ್ಯಾಯಾಲಯಕ್ಕೆ ಹಾಜರುಪಡಿಸಿರುತ್ತೇನೆ. ನಂತರ ದಿ: 5.5.99 ರಂದು ಸ್ವಾಧೀನಪಡಿಸಿಕೊಂಡ ಸ್ವತ್ತುಗಳನ್ನು ಅಬಕಾರಿ ಇಲಾಖೆಗೆ ಹಸ್ತಾಂತರಿಸಲು ಅಧೀಕ್ಷಕರಿಗೆ ಕೋರಿಕೆ ಪತ್ರವನ್ನು ಸಲ್ಲಿಸಿ, ಅಬಕಾರಿ ಅಧೀಕ್ಷಕರ ಆದೇಶದಂತೆ ಸ್ವತ್ತುಗಳನ್ನು ಅಬಕಾರಿ ನಿರೀಕ್ಷಕರು, ಕೂಳೂರು ವಲಯ ಇವರಿಗೆ ಹಸ್ತಾಂತರಿಸಿದ್ದೇನೆ. ತಾನು ಸ್ವೀಕರಿಸಿದ ವರದಿಯನ್ನು ನೋಡಿದ್ದು ಅದನ್ನು ನಿಶಾನೆ ಪಿ-1 ಎಂದು ಗುರುತಿಸಲಾಯಿತು. ತಾನು ಸಲ್ಲಿಸಿದ ಪ್ರಥಮ ಮಾಹಿತಿ ವರದಿಯನ್ನು ನೋಡಿ ಅದನ್ನು ನಿಶಾನೆ ಪಿ-2 ಎಂದು ಗುರುತಿಸಲಾಯಿತು. ತಾನು ಅಬಕಾರಿ ಅಧೀಕ್ಷಕರಿಗೆ ಸಲ್ಲಿಸಿದ್ದ ವರದಿಯನ್ನು ನೋಡಿ ಅದನ್ನು ನಿಶಾನೆ ಪಿ-3 ಎಂದು ಗುರುತಿಸಲಾಯಿತು.

ಅರ್ಜಿದಾರರ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತಾ ವಾಹನ ಮಾಲೀಕರು ದಸ್ತಗಿರಿ ಮಾಡಿದ ಆರೋಪಿಗಳಲ್ಲಿ ಇರಲಿಲ್ಲ. ಗುರುತಿಸಲಾದ ನಿಶಾನೆ ಪಿ-1 ಜೆರಾಕ್ಸ್ ಪ್ರತಿ ಎಂದು ತಿಳಿಸಿರುತ್ತಾರೆ.

**ಪ್ರಾ.ಸಾ-2:**

ಶ್ರೀ ಪ್ರಭುದೇವ್ ಮಾನೆ, ಆರಕ್ಷಕ ನಿರೀಕ್ಷಕರು ಈ ಪ್ರಕರಣದ ಫಿರ್ಯಾದುದಾರರಾಗಿದ್ದು ದಿ: 11.4.01 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷಿ ನೀಡಿರುತ್ತಾರೆ. ಅವರು 4.5.99 ರಂದು ಮಧ್ಯಾಹ್ನ 12.45 ಗಂಟೆಗೆ ತಾನು ಠಾಣೆಯಲ್ಲಿದ್ದಾಗ ಬಂದ ಖಚಿತ ವರ್ತಮಾನದ ಮೇರೆಗೆ ತನ್ನ ಜೀಪಿನಲ್ಲಿ ಆರಕ್ಷಕ ಸಹಾಯಕ ಉಪ ನಿರೀಕ್ಷಕರು ಮತ್ತು ಸಿಬ್ಬಂದಿಯೊಂದಿಗೆ ಹಾಗೂ ಪಂಚಯಾತುದಾರರೊಂದಿಗೆ ಪಣಂಬೂರು ಸಿ.ಐ.ಎಸ್.ಎಫ್ ಕಾಲೋನಿಯ ಬಳಿಗೆ ಹೋಗಿ ಅಲ್ಲಿ ಕಾದು ಕುಳಿತಾಗ ಅಬ್ಸ್‌ರ್‌ವೇಟರ್ ಕಡೆಯಿಂದ ಒಂದು ಲಾರಿ ಬರುವುದನ್ನು ತಡೆದು ನಿಲ್ಲಿಸಿ ಪರಿಶೀಲಿಸಲಾಗಿ ಸದ್ರಿ ಲಾರಿ ಸಂ: ಕೆಎ-21-2975 ಆಗಿದ್ದು ಅದನ್ನು ಸಿಬ್ಬಂದಿಯವರ ಸಹಾಯದಿಂದ ಚೆಕ್ ಮಾಡಿ ನೋಡಲಾಗಿ ಲಾರಿ ಬಾಡಿಯಲ್ಲಿ ಪೂರ್ತಿ ಟಾರ್ಪಾಲ್ ಹಾಕಿದ್ದು ಅದನ್ನು ಪರಿಶೀಲಿಸಲಾಗಿ ಅದರಲ್ಲಿ ಬಿಳಿಬಣ್ಣದ 115 ಕ್ಯಾನುಗಳಿದ್ದು ಅದರಲ್ಲಿ ಸ್ಪಿರಿಟ್ ತುಂಬಿದ್ದು ಲಾರಿಯಲ್ಲಿದ್ದ ಚಾಲಕನನ್ನು ಸ್ಪಿರಿಟ್ ಬಗ್ಗೆ ಪರ್ಮಿಟ್ ಕೇಳಿದಲ್ಲಿ ಯಾವುದೂ ಇಲ್ಲವೆಂದು ತಿಳಿಸಿದ್ದು ಸದ್ರಿ ಸ್ವತ್ತುಗಳನ್ನು ಪುತ್ತೂರು ಕಡೆಗೆ ಸಾಗಾಟ ಮಾಡುವುದಾಗಿ ತಿಳಿಸಿದ್ದು 35 ಲೀ. ತುಂಬುವಂತಹ ಒಟ್ಟು 115 ಕ್ಯಾನುಗಳಿದ್ದು 114 ಕ್ಯಾನುಗಳಲ್ಲಿ ತಲಾ 35 ಲೀಟರಿನಂತೆ ಸ್ಪಿರಿಟ್ ತುಂಬಿದ್ದು 1 ಕ್ಯಾನಿನಲ್ಲಿ 10 ಲೀಟರು ಸ್ಪಿರಿಟ್ ಇದ್ದು ಇದರಿಂದ 1 ಮತ್ತು 2 ರಲ್ಲಿ ಸ್ಯಾಂಪಲ್‌ಗಾಗಿ ತಲಾ 750 ಮಿಲಿಯಂತೆ 2 ಬಾಟ್ಲಿ ತೆಗೆದಿರಿಸಿ ಸದ್ರಿ ಬಾಟ್ಲಿಗಳಿಗೆ ಬಿಳಿ ಬಟ್ಟೆ ಸುತ್ತಿ ಪಿ.ಪಿ.ಎಸ್. ಅರಗು ಸೀಲು ಮಾಡಿ ಪಂಚರ ಸಮಕ್ಷಮ ಜಪ್ತುಪಡಿಸಲಾಯಿತು. ಲಾರಿ ಸಂ: ಕೆಎ-21-2975 ಲಾರಿಯನ್ನು ಹಾಗೂ ಸದ್ರಿ ಮಾಲನ್ನು ಪಂಚನಾಮೆ ಮುಖಾಂತರ ಪಂಚರ ಸಮಕ್ಷಮ ಸ್ವಾಧೀನಪಡಿಸಿಕೊಂಡು ಲಾರಿಯ ಚಾಲಕ ಚಾರ್ಲ್ಸ್ ಡಿಸೋಜಾ ಹಾಗೂ ಲಾರಿಯಲ್ಲಿದ್ದ ರಮೇಶ್ ಗಿರಿಯ ಮತ್ತು ರಾಜೇಶ್ ಇವರುಗಳನ್ನು ಬಂಧಿಸಲಾಯಿತು. ಮಹಜರನ್ನು ಸ್ಥಳದಲ್ಲಿಯೇ ಮಧ್ಯಾಹ್ನ 1 ರಿಂದ 2 ಗಂಟೆಯವರೆಗೆ ಬರೆದು ಮುಗಿಸಲಾಯಿತು. ಅದರ ಮೂಲ ಪ್ರತಿಯು ನ್ಯಾಯಾಲಯದಲ್ಲಿದ್ದು, ಅದರ ಪ್ರತಿಯನ್ನು ನೋಡಿರುತ್ತೇನೆ.

ಅದು ನಿಶಾನೆ ಪಿ-4 ಆಗಿರುತ್ತದೆ. ಅದರಲ್ಲಿನ ಸಹಿಯನ್ನು ನಿಶಾನೆ ಪಿ-4 ಎ ಎಂದು ಗುರುತಿಸಲಾಯಿತು. ಮೇಲ್ಕಂಡ ಜಪ್ತಾದ ಮಾಲುಗಳನ್ನು ಲಾರಿಯೊಂದಿಗೆ ಪಣಂಬೂರು ಠಾಣೆಗೆ ತಂದು ನನ್ನ ವರದಿಯೊಂದಿಗೆ ಸಲ್ಲಿಸಿರುತ್ತೇನೆ. ಸದ್ರಿ ವರದಿಯ ಪ್ರತಿಯನ್ನು ಗುರುತಿಸಿದೆನು. ಅದನ್ನು ಈಗಾಗಲೇ ನಿಶಾನೆ ಪಿ-1 ಎಂದು ಗುರುತಿಸಲಾಗಿದೆ. ಅದರ ಮೇಲಿನ ನನ್ನ ಸಹಿಯನ್ನು ನಿಶಾನೆ ಪಿ-1 ಎ ಎಂದು ಗುರುತಿಸಲಾಗಿದೆ. ಚಾಲಕನು ವಾಹನಕ್ಕೆ ಸಂಬಂಧಿಸಿದ ದಾಖಲೆಗಳನ್ನು ಹಾಜರುಪಡಿಸಲಿಲ್ಲ ಎಂದು ಸಾಕ್ಷಿ ನೀಡಿರುತ್ತಾರೆ. ಅರ್ಜಿದಾರರ ಪರ ವಕೀಲರು ಹಾಜರಿಲ್ಲದ ಕಾರಣ ಪಾಟೀ ಸವಾಲು ಇಲ್ಲ ಎಂದು ಪರಿಗಣಿಸಲಾಗಿರುತ್ತದೆ.

**ಪ್ರಾ.ಸಾ-3:**

ಶ್ರೀ ಮೋಹನ್ ಕೆ.ವಿ., ಪಿ.ಸಿ. 1133 ಇವರು ದಿನಾಂಕ: 11.4.03 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷಿ ನೀಡಿರುತ್ತಾರೆ. ತಾನು ದಿನಾಂಕ: 4.5.99 ರಂದು ಇನ್ಸ್‌ಪೆಕ್ಟರ್ ಪ್ರಭುದೇವ್ ಮಾನೆ ಇವರು ಖಚಿತ ವರ್ತಮಾನವಿದೆಯೆಂದು ನನ್ನನ್ನು ಮತ್ತು ಪೊಲೀಸ್ ಸಿಬ್ಬಂದಿಯವರನ್ನೂ ಕರೆದುಕೊಂಡು ಬಂದಾಗ ನಾನು ಅವರೊಂದಿಗೆ ಸಿ.ಐ.ಎಸ್.ಎಫ್. ಕಾಲೋನಿ ರಸ್ತೆಗೆ ಬಂದೆವು. ಅಲ್ಲಿ ಕಾಯುತ್ತಿರುವಾಗ ಉತ್ತರ ದಿಕ್ಕಿನಿಂದ ಒಂದು ಲಾರಿ ಬಂದಿತು. ಸದ್ರಿ ಲಾರಿಯನ್ನು ತಡೆದು ನಿಲ್ಲಿಸಿದೆನು. ಲಾರಿಯನ್ನು ಪರಿಶೀಲಿಸಿ ಹಿಂಬದಿಯ ಟಾರ್ಪಾಲನ್ನು ತೆಗೆದು ನೋಡಲಾಗಿ, ಅದರಲ್ಲಿ ಸ್ಪಿರಿಟ್ ತುಂಬಿದ್ದ 115 ಕ್ಯಾನುಗಳು ಇದ್ದವು. ಪ್ರತಿ ಕ್ಯಾನ್‌ಗಳು 35 ಲೀ. ಸಾಮರ್ಥ್ಯ ಹೊಂದಿದ್ದು, ಪ್ರತಿಯೊಂದು ಕ್ಯಾನುಗಳು ತುಂಬಿದ್ದವು. ಒಂದರಲ್ಲಿ ಮಾತ್ರ ಸ್ವಲ್ಪ ಕಡಿಮೆಯಿತ್ತು. ಲಾರಿಯ ಕ್ಯಾಬಿನ್‌ನಲ್ಲಿ ಚಾಲಕನು ಸೇರಿ ಒಟ್ಟು 4 ಜನ ಇದ್ದರು. ಸದ್ರಿ ಸ್ಪಿರಿಟಿನ ಬಗ್ಗೆ ಪರ್ಮಿಟ್ ಇದೆಯೇ ಎಂದು ಕೇಳಲು ಇಲ್ಲ ಎಂದು ಉತ್ತರಿಸಿದರು. ಸದ್ರಿ ಕ್ಯಾನ್‌ಗಳಲ್ಲಿ ತಲಾ ಸ್ಪಿರಿಟನ್ನು ಮಾದರಿ ತೆಗೆದು ಸೀಸೆಯಲ್ಲಿ ತುಂಬಿಸಿ ಸೀಲ್ ಮಾಡಿದೆವು. ಸ್ಥಳದಲ್ಲಿಯೇ ಮಹಜರು ಬರೆಯಲಾಯಿತು. ಮಹಜರಿನಲ್ಲಿ ನನ್ನ ಸಹಿ ಇದೆ. ಅದರಲ್ಲಿ ನನ್ನ ಸಹಿ ನಿಶಾನೆ ಪಿ-4 ಬಿ ಎಂದು ಗುರುತಿಸಲಾಯಿತು. ನಂತರ ನಿರೀಕ್ಷಕರು ಸದ್ರಿ ಲಾರಿಯನ್ನು, ಸ್ಪಿರಿಟ್ ಮತ್ತು ಆರೋಪಿಗಳೊಂದಿಗೆ ಪಣಂಬೂರು ಠಾಣೆಗೆ ಹಿಂತಿರುಗಿ ಬಂದರು. ಸದ್ರಿ ಲಾರಿಯನ್ನು ಮತ್ತು ಸ್ಪಿರಿಟ್ ಇತ್ಯಾದಿಗಳನ್ನು ತೋರಿಸಿದಲ್ಲಿ ಗುರುತಿಸುತ್ತೇನೆ ಎಂದು ಸಾಕ್ಷಿ ನೀಡಿರುತ್ತಾರೆ. ಅರ್ಜಿದಾರರ ಪರ ವಕೀಲರು ಇಲ್ಲದ್ದರಿಂದ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಿದೆ.

**ಪ್ರಾ.ಸಾ-4:**

ಶ್ರೀ ಸಿ.ಹೆಚ್. ಗಣಪತಿ, ಅಬಕಾರಿ ರಕ್ಷಕರು, ಕೂಳೂರು ವಲಯ ಇವರು ದಿನಾಂಕ: 11.4.2002 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷಿ ನೀಡಿರುತ್ತಾರೆ. ಅವರು ದಿನಾಂಕ: 19.5.99 ರಂದು ಈ ಪ್ರಕರಣಕ್ಕೆ ಸಂಬಂಧಿಸಿದ 750 ಮಿಲಿ ಸಾಮರ್ಥ್ಯದ 2 ಮಾದರಿ ಶೀಷೆಗಳನ್ನು ರಾಸಾಯನಿಕ ತಜ್ಞರಲ್ಲಿಗೆ ಕೊಂಡು ಹೋದೆನು. ಅದೇ ದಿನ ರಾಸಾಯನಿಕ ವರದಿಯೊಂದಿಗೆ ಬಾಟ್ಲಿಗಳನ್ನು ತಂದಿರುತ್ತೇನೆ. ಸದ್ರಿ ವರದಿಯ ಪ್ರತಿಯನ್ನು ನೋಡಿ ಗುರುತಿಸಿದೆನು. ಅದನ್ನು ನಿಶಾನೆ ಪಿ-5 ಎಂದು ಗುರುತಿಸಲಾಗಿದೆ ಎಂದು ಸಾಕ್ಷಿ ನೀಡಿರುತ್ತಾರೆ.

ಅರ್ಜಿದಾರರ ಪರ ವಕೀಲರು ಇಲ್ಲದ್ದರಿಂದ ಪಾಟೀ ಸವಾಲು ಇಲ್ಲ ಎಂದು ಪರಿಗಣಿಸಲಾಗಿದೆ.

**ಪ್ರಾ.ಸಾ-5:**

ಶ್ರೀ ಎಸ್. ತಮ್ಮ, ಅಬಕಾರಿ ಉಪ ನಿರೀಕ್ಷಕರು, ಸುಳ್ಯ ವಲಯ ಇವರು ಈ ಪ್ರಕರಣದ ತನಿಖಾಧಿಕಾರಿಯಾಗಿದ್ದು, ದಿನಾಂಕ: 12.12.2002 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿ ನೀಡಿರುತ್ತಾರೆ. ಅವರು ದಿನಾಂಕ: 15.5.99 ರಂದು ಈ ಪ್ರಕರಣಕ್ಕೆ ಸಂಬಂಧಪಟ್ಟ ದಾಖಲೆ ಹಾಗೂ ಸ್ವತ್ತುಗಳನ್ನು ಪಣಂಬೂರು ಪೊಲೀಸ್ ಅಧಿಕಾರಿಯವರಿಂದ ಪಡೆದಿರುತ್ತೇನೆ. ಈ ತಕ್ಷೀರಿನ ಮಾದರಿ ಶೀಷೆಗಳನ್ನು ಮತ್ತು ದಾಖಲಾತಿಗಳನ್ನು ದಿನಾಂಕ: 19.5.99 ರಂದು ಶ್ರೀ ಸಿ.ಹೆಚ್. ಗಣಪತಿ, ಅಬಕಾರಿ ರಕ್ಷಕ ಇವರ ಮೂಲಕ ರಾಸಾಯನಿಕ ತಜ್ಞರಲ್ಲಿಗೆ ಕಳುಹಿಸಿದೆನು. ಅದೇ ದಿವಸ ರಾಸಾಯನಿಕ ವರದಿ ಮತ್ತು ವಿಶ್ಲೇಷಣಾ ಬಾಟ್ಲಿಗಳನ್ನು ಹಿಂದಕ್ಕೆ ಪಡೆದಿರುತ್ತೇನೆ. ನಂತರ ಮದ್ಯಸಾರವನ್ನು ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ಇವರ ಆದೇಶದಂತೆ 24.6.99 ರಂದು ಮದ್ಯಸಾರವನ್ನು ಮೆ: ಮೈ ಶುಗರ್ ಸಾರಾಯಿ ಸಂಸ್ಕರಣ ಘಟಕ, ಮಂಗಳೂರು ಇವರಿಗೆ ಹಸ್ತಾಂತರಿಸಿರುತ್ತೇನೆ. ಅಧಿಕೃತ ಅಧಿಕಾರಿಗಳ ಆದೇಶದಂತೆ ತಾತ್ಕಾಲಿಕವಾಗಿ ವಾಹನವನ್ನು ದಿನಾಂಕ: 9.12.99 ರಂದು ವಾಹನ ಮಾಲೀಕರಿಗೆ ಹಸ್ತಾಂತರಿಸಲಾಗಿದೆ. ಪ್ರಕರಣದ ತನಿಖೆಯನ್ನು ಮುಗಿಸಿ ಆರೋಪಣಾ ಪಟ್ಟಿಯನ್ನೂ ಜೆ.ಎಂ.ಎಫ್.ಸಿ. ನ್ಯಾಯಾಲಯಕ್ಕೆ ದಿನಾಂಕ: 27.10.99 ರಂದು ಸಲ್ಲಿಸಿರುತ್ತೇನೆ ಎಂದು ಸಾಕ್ಷಿ ನೀಡಿರುತ್ತಾರೆ.

ಅರ್ಜಿದಾರರ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತಾ ಜೆ.ಎಂ.ಎಫ್.ಸಿ. ನ್ಯಾಯಾಲಯದಲ್ಲಿ ಆರೋಪಿಗಳನ್ನು ಖುಲಾಸೆ ಮಾಡಿದ್ದಾರೆ. ಸ್ಯಾಂಪಲ್‌ಗಳನ್ನು ತೆಗೆದವರು ಯಾರು ಎಂಬುದು ಗೊತ್ತಿಲ್ಲ. ಆದರೆ ಪೊಲೀಸ್ ಅಧಿಕಾರಿ ಸ್ಯಾಂಪಲ್ ತೆಗೆಯುವಾಗ ನಾನು ಹಾಜರಿರಲಿಲ್ಲ. ಅದರಲ್ಲಿ 3990 ಲೀ. ಮದ್ಯಸಾರ ಇತ್ತು. ಈ ಮದ್ಯಸಾರ ಎಲ್ಲಿಂದ ಬಂತು ಎಂಬ ಬಗ್ಗೆ ನಾನು ಯಾವುದೇ ತನಿಖೆ ನಡೆಸಿಲ್ಲ ಎಂದು ಸಾಕ್ಷಿ ನೀಡಿರುತ್ತಾರೆ. ಈ ಸಾಕ್ಷ್ಯದಿಂದ ಅರ್ಜಿದಾರರಿಗೆ ಯಾವುದೇ ಪ್ರಯೋಜನ ದೊರೆತಿರುವುದಿಲ್ಲ.

ಈ ಮೇಲಿನ ಪ್ರಾ.ಸಾ. 1 ರಿಂದ ಪ್ರಾ.ಸಾ. 5 ರವರೆಗಿನ ಸಾಕ್ಷಿಗಳು ನೀಡಿರುವ ಹೇಳಿಕೆ ಆಧಾರದಿಂದ ದಿನಾಂಕ: 4.5.99 ರಂದು ವಾಹನ ಲಾರಿ ಸಂಖ್ಯೆ: ಕೆಎ-21-2975 ರಲ್ಲಿ ಅಕ್ರಮವಾಗಿ ಮದ್ಯಸಾರ ಸಾಗಾಟವಾಗಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಅಕ್ರಮ ಸಾಗಣೆಯಾಗಿರುವುದು ನಿಜವೆಂದು ಕಂಡುಬರುತ್ತದೆ. ಆದುದರಿಂದ ಒಂದನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಿದೆ.

ಅರ್ಜಿದಾರರ ಪರ ವಕೀಲರು ತಮ್ಮ ವತಿಯಿಂದ ಪ್ರತಿ ರಕ್ಷಾ ಸಾಕ್ಷಿಯನ್ನು ವಿಚಾರಣೆಗಾಗಿ ಹಾಜರುಪಡಿಸಿದ್ದು, ಸದ್ರಿ ಸಾಕ್ಷಿಯನ್ನು ಡಿಡಬ್ಲ್ಯೂ-1 ಎಂದು ವಿಚಾರಣೆ ನಡೆಸಲಾಗಿದೆ.

**ಡಿ.ಡಬ್ಲ್ಯೂ-1**

ಶ್ರೀ ರಾಧಾಕೃಷ್ಣ ಇವರು ವಾಹನ ಮಾಲೀಕರಾಗಿದ್ದು, ಅವರು ದಿನಾಂಕ: 18.12.2003 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷಿ ನೀಡಿರುತ್ತಾರೆ.

ಈ ಪ್ರಕರಣದಲ್ಲಿ ಜಪ್ತುಪಡಿಸಿರುವ ವಾಹನದ ನೋಂದಣಿ ಮಾಲೀಕರಾಗಿರುತ್ತೇನೆ. ಸದ್ರಿ ಲಾರಿಯನ್ನು ಡಿ.ಸಿ.ಸಿ. ಬ್ಯಾಂಕಿನಿಂದ ಸಾಲ ತೆಗೆದು ಖರೀದಿಸಿರುತ್ತೇನೆ. ಸಾಲಕ್ಕೆ ಸಂಬಂಧಿಸಿದಂತೆ ತಾನು ರೂ. 60,000/- ಗಳು ಮರುಪಾವತಿ ಮಾಡಲು ಬಾಕಿಯಿದೆ. ದಿನಾಂಕ: 4.5.99 ರಂದು ಫೋನ್ ಮೂಲಕ ಲಾರಿಯನ್ನು ವಶಪಡಿಸಿಕೊಂಡಿರುವುದನ್ನು ಚಾಲಕನು ಫೋನ್ ಮೂಲಕ ತಿಳಿಸಿದ, ವಾಹನವನ್ನು ಜಪ್ತುಪಡಿಸಿದ ಸಮಯ ಚಾರ್ಲ್ಸ್ ಡಿಸೋಜ ಎಂಬುವನು ವಾಹನ ಚಾಲಕನಾಗಿದ್ದನು. ನಮ್ಮ ಲಾರಿಯಲ್ಲಿ ಗೊಬ್ಬರ ಮತ್ತು ದಿನಸಿ ಅಂಗಡಿ ಸಾಮಾನನ್ನು ಸಾಗಿಸುತ್ತೇವೆ. ಸದ್ರಿ ಚಾಲಕನಿಗೆ ಕಾನೂನು ಬಾಹಿರವಾಗಿ ವಾಹನವನ್ನು ಉಪಯೋಗಿಸಕೂಡದೆಂದು ಎಚ್ಚರಿಕೆ ನೀಡಿರುತ್ತೇನೆ. ದಿ: 4.5.99 ರಂದು ವಿಚಾರ ಮಾಡಲಾಗಿ ಯಾವುದೇ ಕಾನೂನುಬಾಹಿರ ಸಾಗಾಣಿಕೆ ಮಾಡಿಲ್ಲವೆಂದು, ಲಾರಿಯನ್ನು ಪಣಂಬೂರಿನ ದೀಪಕ್ ಪಂಪಿನಲ್ಲಿ ಪಾರ್ಕ್ ಮಾಡಿರುವುದಾಗಿ ತಿಳಿಸಿದನು. ಇದುವರೆಗೆ ನಮ್ಮ ಲಾರಿಯಲ್ಲಿ ಯಾವುದೇ ಅಬಕಾರಿ ವಸ್ತುವನ್ನು ಸಾಗಿಸಿರುವುದಿಲ್ಲ. ನಮ್ಮ ಚಾಲಕನ ಮೇಲೆ ಜೆ.ಎಂ.ಎಫ್.ಸಿ. ನ್ಯಾಯಾಲಯಲ್ಲಿ ಕ್ರಿಮಿನಲ್ ಮೊಕದ್ದಮೆ ದಾಖಲಾಗಿದ್ದು, ಸದ್ರಿ ಮೊಕದ್ದಮೆಯಲ್ಲಿ ಬಿಡುಗಡೆ ಆಗಿದ್ದಾನೆ. ನನಗೆ ರಾಜೇಶ್, ರಮೇಶ ಎಂಬುವರ ಪರಿಚಯವಿಲ್ಲ. ಸದ್ರಿ ರಮೇಶ್, ರಾಜೇಶ್ ಪಣಂಬೂರಿನ ದೀಪಕ್ ಪಂಪ್‌ನಲ್ಲಿ ತಮ್ಮ ಲಾರಿ ಪಕ್ಕದಲ್ಲಿ ನಿಂತಿದ್ದರೆಂದು ನಮ್ಮ ಚಾಲಕ ತಿಳಿಸಿದ್ದನೆಂದು ಸಾಕ್ಷಿ ನೀಡಿರುತ್ತಾರೆ.

ಸಹಾಯಕ ಅಭಿಯೋಜನ ನಿರ್ದೇಶಕರ ಪಾಟೀ ಸವಾಲಿಗೆ ಉತ್ತರಿಸುತ್ತಾ ಲಾರಿ ಚಾಲಕ ಚಾರ್ಲ್ಸ್ ಡಿಸೋಜ ನಮ್ಮ ಲಾರಿಯಲ್ಲಿ ಚಾಲಕನಾಗಿ ಕೆಲಸ ಮಾಡುತ್ತಿದ್ದು, ಅದಕ್ಕಿಂತ ಮೊದಲು ಬೇರೆಯವರ ಯಾರ ಲಾರಿಯಲ್ಲಿ ಕೆಲಸ ಮಾಡುತ್ತಿದ್ದನೆಂದು ತಿಳಿದಿಲ್ಲ. ಅವನು ಮೂಲತಃ ಪುತ್ತೂರಿನವನಾಗಿರುತ್ತಾನೆ. ಲಾರಿಯ ವ್ಯವಹಾರವನ್ನು ನಾನೇ ನೋಡುತ್ತೇನೆ. ದಿನಾಂಕ: 4.5.99 ರಂದು ಬೆಳಿಗ್ಗೆ ಲಾರಿ ನಮ್ಮ ಮನೆಯಿಂದ ಹೋಗಿತ್ತು. ಆದರೆ ಯಾವ ಬಾಡಿಗೆಗೆ ಹೋಗಿತ್ತು ಎಂದು ಗೊತ್ತಿಲ್ಲ. ದಿನಾಂಕ: 4.5.99 ರಂದು ನಮ್ಮ ಲಾರಿಯಲ್ಲಿ ಅನಧಿಕೃತವಾಗಿ ಸ್ಪಿರಿಟ್ ಸಾಗಾಟ ಮಾಡಿದ ವಿಷಯ ನನಗೆ ಗೊತ್ತು ಎಂದರೆ ಸರಿಯಲ್ಲ. ನನಗೆ ವಿಷಯ ಗೊತ್ತಿಲ್ಲವೆಂದು ಸುಳ್ಳು ಹೇಳುತ್ತಿದ್ದೇನೆಂದರೆ ಸರಿಯಲ್ಲ ಎಂದು ತಮ್ಮ ಸಾಕ್ಷಿಯನ್ನು ನೀಡಿರುತ್ತಾರೆ.

ಈ ಅಪರಾಧವು ತನ್ನ ತಿಳುವಳಿಕೆಗೆ ಬಾರದೇ ನಡೆದಿದೆ ಎಂಬುದನ್ನು ಸಾಕ್ಷ್ಯಾಧಾರಗಳ ಮೂಲಕ ಸಾಬೀತುಪಡಿಸುವುದು ವಾಹನ ಮಾಲೀಕರ ಜವಾಬ್ದಾರಿಯಾಗಿದ್ದು, ಈ ಪ್ರಕರಣದಲ್ಲಿ ವಾಹನ ಮಾಲೀಕರು ತನ್ನ ತಿಳುವಳಿಕೆಗೆ ಬಾರದೆ ಈ ಕೃತ್ಯವು ನಡೆದಿದೆ ಎಂಬುದಕ್ಕೆ ಯಾವುದೇ ಸಾಕ್ಷಿಯನ್ನು ಹಾಜರುಪಡಿಸಿರುವುದಿಲ್ಲ. ಹಾಗೂ ಈ ಅಪರಾಧವು ತನ್ನ ತಿಳುವಳಿಕೆಗೆ ಬಾರದೇ ನಡೆದಿದೆ ಎಂದು ಸಾಬೀತುಪಡಿಸಲು ವಿಫಲರಾಗಿರುತ್ತಾರೆ. ಈ ಕಾರಣದಿಂದ ಎರಡನೇ ಅಂಶಕ್ಕೆ ನಕಾರಾತ್ಮಕವಾಗಿ ಇಲ್ಲ ಎಂದು ಪರಿಗಣಿಸಿರುತ್ತೇನೆ.

ಅಭಿಯೋಜನೆ ಪರ ಸಾಕ್ಷಿಗಳ ಆಧಾರದಿಂದ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ದಿ: 4.5.99 ರಂದು ವಾಹನ ಲಾರಿ ಸಂಖ್ಯೆ: ಕೆಎ-21-2975 ರಲ್ಲಿ ಅಕ್ರಮವಾಗಿ 4,000 ಲೀಟರ್ ಮದ್ಯಸಾರ ಸಾಗಣೆಯಾಗಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ.

1965ನೇ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 54ರ ಅಡಿಯಲ್ಲಿ ವಾಹನವನ್ನು ತಪಾಸಣೆ ಮಾಡಲು ಸರ್ಚ್ ವಾರಂಟ್ ಪಡೆಯದೇ ಹಾಗೂ ಪಡೆಯದೇ ಇರುವುದಕ್ಕೆ ಕಾರಣಗಳನ್ನು ನಮೂದಿಸದೇ ಇದ್ದರೆ ಈ ಕಾರಣಕ್ಕಾಗಿ ಅಬಕಾರಿ ವಸ್ತುಗಳನ್ನು ವಶಪಡಿಸಿಕೊಂಡಿರುವುದು ಕಾನೂನು ಬಾಹಿರವಾಗುವುದಿಲ್ಲ. ಈ ಕುರಿತು ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ತೀರ್ಪನ್ನು ಉಲ್ಲೇಖಿಸಬಹುದಾಗಿದೆ. ಐ.ಎಲ್.ಆರ್. 2004 ಕರ್ನಾಟಕ 527 ರಲ್ಲಿ ವರದಿಯಾದ ಪ್ರಕರಣ ಸೋಮನಾಥ ಕೆರೆಬೈಲ್ ವಿರುದ್ಧ ಸರ್ಕಾರದ ಅಬಕಾರಿ ಉಪ ಆಯುಕ್ತರು, ಬೆಳಗಾಂ ಜಿಲ್ಲೆ ಈ ಪ್ರಕರಣದಲ್ಲಿ ಮಾನ್ಯ ಉಚ್ಚ ನ್ಯಾಯಾಲಯವು ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾ ಅಬಕಾರಿ ಕಾಯ್ದೆ ಕಲಂ 54ರ ಅಡಿಯ ಪ್ರಕ್ರಿಯೆಯನ್ನು ಅನುಸರಿಸುವಲ್ಲಿ ಅಧಿಕಾರಿಗಳು ವಿಫಲವಾದರೆ ಅಬಕಾರಿ ಕಾಯ್ದೆ ಉಲ್ಲಂಘನೆಯಿಂದ ವಶಪಡಿಸಿಕೊಂಡ ಯಾವುದೇ ವಸ್ತು ಕಾನೂನು ಬಾಹಿರವಾಗುವುದಿಲ್ಲ ಎಂಬುದನ್ನು ಸ್ಪಷ್ಟವಾಗಿ ವ್ಯಕ್ತಪಡಿಸುತ್ತದೆ. ಈ ಮೇಲೆ ವ್ಯಕ್ತಪಡಿಸಿರುವ ಅಭಿಪ್ರಾಯದಂತೆ ಪ್ರಸ್ತುತ ಪ್ರಕರಣದಲ್ಲಿ ಕಲಂ 54 ರ ಪ್ರಕ್ರಿಯೆಯನ್ನು ಅನುಸರಣೆ ಮಾಡದೇ ಇದ್ದರೂ ಜಪ್ತುಪಡಿಸಲಾಗಿರುವ ವಾಹನದಲ್ಲಿ ಅಕ್ರಮವಾಗಿ ಮದ್ಯಸಾರ ಸಾಗಾಣೆಯಾಗಿರುತ್ತದೆ ಎಂಬುದನ್ನು ಫಿರ್ಯಾದುದಾರರು ಹಾಗೂ ತನಿಖಾಧಿಕಾರಿಗಳು ರುಜುವಾತುಪಡಿಸಿರುವುದರಿಂದ ಜಪ್ತುಗೊಳಿಸಿರುವ ವಾಹನವು ಕಾನೂನುಬಾಹಿರವಾಗುವುದಿಲ್ಲ. ಹಾಗೂ ಮುಟ್ಟುಗೋಲು ಪ್ರಕ್ರಿಯೆಗೆ ಯಾವುದೇ ರೀತಿಯ ಲೋಪವುಂಟಾಗುವುದಿಲ್ಲ.

ಈ ಎಲ್ಲಾ ಕಾರಣಗಳಿಂದ ಈ ಪ್ರಕರಣದಲ್ಲಿ ಜಪ್ತುಗೊಳಿಸಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ ಈ ಕೆಳಗಿನಂತೆ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಸಂ: ಎಸ್‌ಡಿಕೆ:1182:ಡಿಟಿಸಿಆರ್: 98-99, ದಿನಾಂಕ: 15ನೇ ಏಪ್ರಿಲ್ 2004**

ಗೋವಿಂದಪ್ಪ ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಅಧಿನಿಯಮ 1965 ಕಲಂ 43 (ಎ) ರ ಅಡಿಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಪೊಲೀಸು ಉಪ ನಿರೀಕ್ಷಕರು, ಪಣಂಬೂರು ಪೊಲೀಸು ಠಾಣೆ, ಪಣಂಬೂರು ಇವರು ದಾಖಲು ಮಾಡಿದ ಮೊಕದ್ದಮೆ ಸಂಖ್ಯೆ: 55/99 ದಿನಾಂಕ: 4.5.99 ರಲ್ಲಿ ಜಪ್ತುಪಡಿಸಲಾಗಿರುವ ವಾಹನ ಲಾರಿ ಸಂ: ಕೆಎ-21-2975 ನ್ನು ಕರ್ನಾಟಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿ: 15.4.2004 ರಂದು ಉತ್ತಲೇಖನ ಕೊಟ್ಟು ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

**ಗೋವಿಂದಪ್ಪ**

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,

ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ - 1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:**

ಪ್ರಾ.ಸಾ.: 1 - ಶ್ರೀ ಮೋನಪ್ಪಗೌಡ, ಆರಕ್ಷಕ ಸಹಾಯಕ ಉಪ ನಿರೀಕ್ಷಕರು, ಪಣಂಬೂರು ಆರಕ್ಷಕ ಠಾಣೆ

ಪ್ರಾ.ಸಾ.: 2 - ಶ್ರೀ ಪ್ರಭುದೇವ್ ಮಾನೆ, ಆರಕ್ಷಕ ನಿರೀಕ್ಷಕರು, ಉತ್ತರ ಠಾಣೆ, ಮಂಗಳೂರು

ಪ್ರಾ.ಸಾ.: 3 - ಶ್ರೀ ಮೋಹನ್ ಕೆ.ವಿ. ಪಿ.ಸಿ. 1133

ಪ್ರಾ.ಸಾ.: 4 - ಶ್ರೀ ಸಿ.ಹೆಚ್. ಗಣಪತಿ, ಅಬಕಾರಿ ರಕ್ಷಕ, ಕೂಳೂರು ವಲಯ

ಪ್ರಾ.ಸಾ.: 5 - ಶ್ರೀ ಎಸ್. ತಮ್ಮ, ಅಬಕಾರಿ ಉಪ ನಿರೀಕ್ಷಕರು, ಸುಳ್ಯ ವಲಯ

**ಅನುಬಂಧ - 2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:**

ನಿಶಾನೆ ಪಿ-1 - ಫಿರ್ಯಾದುದಾರರ ವರದಿ

ನಿಶಾನೆ ಪಿ-2 - ಪ್ರಥಮ ಮಾಹಿತಿ ವರದಿಯ ಪ್ರತಿ

ನಿಶಾನೆ ಪಿ-3 - ಪೊಲೀಸು ಉಪ ನಿರೀಕ್ಷಕರ ವರದಿ

ನಿಶಾನೆ ಪಿ-4 - ಮಹಜರು

ನಿಶಾನೆ ಪಿ-5 - ಕೆಮಿಕಲ್ಸ್ ವರದಿ

**ಅನುಬಂಧ - 3**

**ವಾಹನ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು:**

ಡಿ.ಡಬ್ಲ್ಯೂ-1 - ವಾಹನ ಮಾಲೀಕರು ಶ್ರೀ ರಾಧಕೃಷ್ಣ ಕೆ. ಅಡ್ಯಂತಾಯ, ದರ್ಬೆ, ಪುತ್ತೂರು

**ಅನುಬಂಧ - 4**

ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು - ಇಲ್ಲಾ

**ಗೋವಿಂದಪ್ಪ**

ಪಿ.ಆರ್. 602

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

## ಅಂತಿಮ ಅಧಿಸೂಚನೆ

**ನಂ. ಕೆ.ಎಸ್.ಎ.ಸಿ.ಆರ್/24/2003-04, ದಿನಾಂಕ: 7ನೇ ಏಪ್ರಿಲ್ 2004**

ನಂ. ಕೆ.ಎಸ್.ಎ.ಸಿ.ಆರ್/24/2002-03, ದಿನಾಂಕ: 24.1.1998ರ ಪ್ರಿಲಿಮಿನರಿ ಅಧಿಸೂಚನೆಯನ್ನು ದಿನಾಂಕ: 17.2.2002ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಿ ಅದರಲ್ಲಿ ಸದರೀ ಅಧಿಸೂಚನೆಯ ಷೆಡ್ಯೂಲ್‌ನಲ್ಲಿರುವ ಇಸ್ರೋ ಕ್ವಾರ್ಟಸ್ ಹಿಂಭಾಗದ ಕೊಳಚೆ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ನಿರ್ಮೂಲನಾ ಮತ್ತು ಅಭಿವೃದ್ಧಿ) ಕಾಯ್ದೆ 1973ರ ಸೆಕ್ಷನ್ 3 ರಡಿಯಲ್ಲಿ ಪ್ರಾರಂಭಿಕವಾಗಿ ಕೊಳಚೆ ಪ್ರದೇಶವೆಂದು ಘೋಷಿಸಿ ಸಂಬಂಧಿಸಿದವರಿಂದ ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿತ್ತು.

ಸದರೀ ಪ್ರಕರಣವನ್ನು ವಿಚಾರಣೆಗೆ ತೆಗೆದುಕೊಂಡು ವಿಚಾರಣೆ ನಡೆಸಲಾಗಿದೆ. ಪ್ರಶ್ನಿತ ಕೊಳಚೆ ಪ್ರದೇಶವಿರುವ ಜಾಗವು ರಕ್ಷಣಾ ಇಲಾಖೆಗೆ ಸೇರಿದ್ದು ಇಸ್ರೋಕ್ವಾರ್ಟಸ್ ಹಿಂಭಾಗದಲ್ಲಿರುತ್ತದೆ. ಸದರಿ ಕೊಳಚೆ ಪ್ರದೇಶದಲ್ಲಿನ ನಿವಾಸಿಗಳನ್ನು ಅಲ್ಲಿಂದ ಸ್ಥಳಾಂತರಿಸಲು ಸರ್ಕಾರದ ಮಟ್ಟದಲ್ಲಿ ನಿರ್ಧರಿಸಲಾಗಿದ್ದು ಇದಕ್ಕಾಗಿ ಬೆಂಗಳೂರು ಪೂರ್ವ ತಾಲ್ಲೂಕಿನ ಸಾದರಮಂಗಲ ಗ್ರಾಮದಲ್ಲಿನ ಸರ್ಕಾರಿ ಭೂಮಿಯನ್ನು ಕೊಳಚೆ ನಿರ್ಮೂಲನಾ ಮಂಡಳಿಗೆ ಮಂಜೂರು ಮಾಡಲಾಗಿದೆಯೆಂದೂ ಆದ್ದರಿಂದ ಸದರೀ ಪ್ರದೇಶವನ್ನು ಸೆಕ್ಷನ್ 3 ರಡಿಯಲ್ಲಿ ಅಂತಿಮವಾಗಿ ಕೊಳಚೆ ಪ್ರದೇಶವೆಂದು ಘೋಷಿಸಿ ಕೊಳಚೆ ನಿರ್ಮೂಲನಾ ಮಂಡಳಿಯ ಅಧಿಕಾರಿಗಳು ವಿಚಾರಣಾ ವೇಳೆಯಲ್ಲಿ ತಿಳಿಸಿರುತ್ತಾರೆ.

ಆದ್ದರಿಂದ ಕರ್ನಾಟಕ ಕೊಳಚೆ ಪ್ರದೇಶಗಳ (ನಿರ್ಮೂಲನೆ ಮತ್ತು ಅಭಿವೃದ್ಧಿ) ಕಾಯ್ದೆ 1973ರ ಸೆಕ್ಷನ್ 3 ರಡಿಯಲ್ಲಿ ದತ್ತವಾಗಿರುವ ಅಧಿಕಾರದಂತೆ ಈ ಕೆಳ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಮೇಲ್ಕಂಡ ಕಾಯ್ದೆಯ ಸೆಕ್ಷನ್ 3 ರಡಿಯಲ್ಲಿ ಅಂತಿಮವಾಗಿ "ಕೊಳಚೆ ಪ್ರದೇಶ" ವೆಂದು ಘೋಷಿಸಿರುತ್ತೇನೆ.

**ಷೆಡ್ಯೂಲ್**

**ಬೆಂಗಳೂರು ನಗರ ವ್ಯಾಪ್ತಿಯ ಇಂದಿರಾನಗರದ ಇಸ್ರೋ ವಸತಿಗೃಹಗಳ ಹಿಂಭಾಗದಲ್ಲಿರುವ ಕೊಳಚೆ ಪ್ರದೇಶದ ಚೆಕ್ಕುಬಂದಿ ಮತ್ತು ಹದ್ದುಬಸ್ತು ತಃಖ್ತೆ:**

| ಕ್ರ. ಸಂ. | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಮಾಲೀಕರ ಹೆಸರು | ಸ.ನಂ. | ವಿಸ್ತೀರ್ಣ | ಚೆಕ್ಕು ಬಂದಿಗಳು | | | |
|---|---|---|---|---|---|---|---|---|
| | | | | | ಪೂರ್ವಕ್ಕೆ | ಪಶ್ಚಿಮಕ್ಕೆ | ಉತ್ತರಕ್ಕೆ | ದಕ್ಷಿಣಕ್ಕೆ |
| 1 | ಇಸ್ರೋ ಕ್ವಾರ್ಟಸ್ ಹಿಂಭಾಗದಲ್ಲಿರುವ ಕೊಳಚೆ ಪ್ರದೇಶ | ರಕ್ಷಣಾ ಇಲಾಖೆ | - | 2-02 | ಸಾಯಿಬಾಬಾ ಮಂದಿರ ರಸ್ತೆಯ ಸೇತುವೆ | ರಕ್ಷಣಾ ಇಲಾಖೆಯ ಉಳಿದ ಭಾಗ | ಚರಂಡಿ (ಡ್ರೈನ್) | ಇಸ್ರೋ ಕ್ವಾರ್ಟಸ್ |

**ಜಿ.ಎಸ್. ನಾರಾಯಣಸ್ವಾಮಿ**

ಪಿ.ಆರ್. 603

ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

## ಅಂತಿಮ ಅಧಿಸೂಚನೆ

### ನಂ. ಕೆ.ಎಸ್.ಎ.ಸಿ.ಆರ್/4/2003-04, ದಿನಾಂಕ: 7ನೇ ಏಪ್ರಿಲ್ 2004

ನಂ. ಕೆ.ಎಸ್.ಎ.ಸಿ.ಆರ್/4/2002-03, ದಿನಾಂಕ: 22.7.2002ರ ಪ್ರಿಲಿಮಿನರಿ ಅಧಿಸೂಚನೆಯನ್ನು ದಿನಾಂಕ: 16.8.2002ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಿ ಅದರಲ್ಲಿ ಸದರೀ ಅಧಿಸೂಚನೆಯ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಎಸ್.ಡಿ.ಎಸ್. ಸ್ಯಾನಿಟೋರಿಯಂ ಪಂಪ್ ಹೌಸ್ ಪಕ್ಕದ ಜೈಭುವನೇಶ್ವರಿ ಕೊಳಚೆ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ನಿರ್ಮೂಲನೆ ಮತ್ತು ಅಭಿವೃದ್ಧಿ) ಕಾಯ್ದೆ 1973ರ ಸೆಕ್ಷನ್ 3 ರಡಿಯಲ್ಲಿ ವೃದ್ಧಿ ಪ್ರಾರಂಭಿಕವಾಗಿ ಕೊಳಚೆ ಪ್ರದೇಶವೆಂದು ಘೋಷಿಸಿ ಸಂಬಂಧಿಸಿದವರಿಂದ ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿತ್ತು.

ಸದರೀ ಪ್ರಿಲಿಮಿನರಿ ಅಧಿಸೂಚನೆಗೆ ಉತ್ತರವಾಗಿ, ಪ್ರಶ್ನಿತ ಕೊಳಚೆ ಪ್ರದೇಶವನ್ನು ಕೊಳಚೆ ಪ್ರದೇಶವೆಂದು ಘೋಷಿಸುವುದನ್ನು ವಿರೋಧಿಸಿ ಎಸ್.ಡಿ.ಎಸ್. ಸ್ಯಾನಿಟೋರಿಯಂನವರು ಆಕ್ಷೇಪಣೆಗಳನ್ನು ಸಲ್ಲಿಸಿರುತ್ತಾರೆ. ಅವರ ಆಕ್ಷೇಪಣೆಯಲ್ಲಿ ತಮ್ಮ ಆಸ್ಪತ್ರೆ ಆವರಣವನ್ನು ಅನಧಿಕೃತವಾಗಿ ಆಕ್ರಮಿಸಿರುವವರನ್ನು ಶೀಘ್ರವಾಗಿ ತೆರವುಗೊಳಿಸಲು ಕೋರಿರುತ್ತಾರೆ. ಕೊಳಚೆ ನಿರ್ಮೂಲನಾ ಮಂಡಳಿಯವರು ಪ್ರಶ್ನಿತ ಕೊಳಚೆ ಪ್ರದೇಶವನ್ನು ಸೆಕ್ಷನ್ 3 ರಡಿಯಲ್ಲಿ ಕೊಳಚೆ ಪ್ರದೇಶವೆಂದು ಘೋಷಿಸಿ ಅಲ್ಲಿನ ನಿವಾಸಿಗಳನ್ನು ಬೇರೆ ಕಡೆ ಪುನರ್ ವಸತಿಗೊಳಿಸಬಹುದೆಂದು ತಿಳಿಸಿರುತ್ತಾರೆ. ಪ್ರಶ್ನಿತ ಕೊಳಚೆ ಪ್ರದೇಶದ ನಿವಾಸಿಗಳನ್ನು ಅಲ್ಲಿಂದ ತೆರವುಗೊಳಿಸಿ ಅವರಿಗೆ ಪುನರ್ ವಸತಿ ಕಲ್ಪಿಸಲು ಕೊಳಚೆ ನಿರ್ಮೂಲನಾ ಮಂಡಳಿಗೆ ಆನೇಕಲ್ ತಾಲ್ಲೂಕು ಸರ್ಜಾಪುರ ಹೋಬಳಿ ಕೂಡ್ಲು ಗ್ರಾಮದ ಸ.ನಂ. 148 ರಲ್ಲಿ 15.00 ಎಕರೆ ಜಮೀನನ್ನು ಮಂಜೂರು ಮಾಡುವ ಬಗ್ಗೆ ಈ ಕಛೇರಿಯಿಂದ ನಂ. ಎನ್.ಎನ್.ಡಿ(ಎ) ಸಿ.ಆರ್: 23/2003-04, ದಿನಾಂಕ: 24.6.2003 ರಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಸಹಾ ಸಲ್ಲಿಸಲಾಗಿದೆ. ಸದರೀ ಜಮೀನು ಮಂಜೂರಾದ ನಂತರ ಪ್ರಶ್ನಿತ ಕೊಳಚೆ ಪ್ರದೇಶದ ನಿವಾಸಿಗಳನ್ನು ಪುನರ್ ವಸತಿಗೊಳಿಸಬಹುದಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಪ್ರಶ್ನಿತ ಕೊಳಚೆ ಪ್ರದೇಶವನ್ನು ಕೊಳಚೆ ನಿರ್ಮೂಲನಾ ಕಾಯ್ದೆಯ ಸೆಕ್ಷನ್ 3 ರಡಿಯಲ್ಲಿ ಅಂತಿಮವಾಗಿ "ಕೊಳಚೆ ಪ್ರದೇಶ" ವೆಂದು ಘೋಷಿಸಲು ಯಾವ ಅಡಚಣೆಗಳು ಇರುವುದಿಲ್ಲ.

ಆದ್ದರಿಂದ ಕರ್ನಾಟಕ ಕೊಳಚೆ ಪ್ರದೇಶಗಳ (ನಿರ್ಮೂಲನೆ ಮತ್ತು ಅಭಿವೃದ್ಧಿ) ಕಾಯ್ದೆ 1973ರ ಸೆಕ್ಷನ್ 3 ರಡಿಯಲ್ಲಿ ದತ್ತವಾಗಿರುವ ಅಧಿಕಾರದಂತೆ ಈ ಕೆಳ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಕೊಳಚೆ ಪ್ರದೇಶವನ್ನು ಮೇಲ್ಕಂಡ ಕಾಯ್ದೆಯ ಸೆಕ್ಷನ್ 3 ರಡಿಯಲ್ಲಿ ಅಂತಿಮವಾಗಿ "ಕೊಳಚೆ ಪ್ರದೇಶ" ವೆಂದು ಘೋಷಿಸಿರುತ್ತೇನೆ. ಈ ಕೊಳಚೆ ಪ್ರದೇಶವನ್ನು ಕೂಡ್ಲು ಗ್ರಾಮದ ಸ.ನಂ. 148 ಕ್ಕೆ ಸ್ಥಳಾಂತರಿಸಲು ಕ್ರಮ ತೆಗೆದುಕೊಳ್ಳುವುದು.

### ಷೆಡ್ಯೂಲ್

**ಬೆಂಗಳೂರು ನಗರ ವ್ಯಾಪ್ತಿಯಲ್ಲಿರುವ ಎಸ್.ಡಿ.ಎಸ್. ಸ್ಯಾನಿಟೋರಿಯಂ ಆಸ್ಪತ್ರೆಯ ಪಂಪ್ ಹೌಸ್ ಪಕ್ಕದ ಜೈ-ಭುವನೇಶ್ವರಿ ಕೊಳಚೆ ಪ್ರದೇಶದ ಚೆಕ್ಕುಬಂದಿ ಮತ್ತು ಹದ್ದುಬಸ್ತು ತಃಖ್ತೆ:**

| ಕ್ರ. ಸಂ. | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಮಾಲೀಕರ ಹೆಸರು | ಸ.ನಂ. | ವಿಸ್ತೀರ್ಣ | ಚೆಕ್ಕು ಬಂದಿಗಳು | | | |
|---|---|---|---|---|---|---|---|---|
| | | | | | ಪೂರ್ವಕ್ಕೆ | ಪಶ್ಚಿಮಕ್ಕೆ | ಉತ್ತರಕ್ಕೆ | ದಕ್ಷಿಣಕ್ಕೆ |
| 1 | ಎಸ್.ಡಿ.ಎಸ್. ಸ್ಯಾನಿಟೋರಿಯಂ ಪಂಪ್ ಹೌಸ್ ಪಕ್ಕದ ಜೈ-ಭುವನೇಶ್ವರಿ ಕೊಳಚೆ ಪ್ರದೇಶ | ಎಸ್‌ಡಿ ಎಸ್ ಸ್ಯಾನಿಟೋ ರಿಯಂ ಆಸ್ಪತ್ರೆ | ಸಿಟಿಎಸ್ 813ರ ಪೈಕಿ ಅಥವಾ ಸ.ನಂ. 23/1 ಸ.ನಂ. 25.1ರ ಪೈಕಿ | 2-35 | ಎಸ್‌ಡಿಎಸ್ ಸ್ಯಾನಿಟೋ ರಿಯಂ | ಎಸ್‌ಡಿಎಸ್ ಸ್ಯಾನಿಟೋ ರಿಯಂ | ಖಾಸಗಿ ಮನೆ ಮತ್ತು ನಿವೇಶನ ಗಳು | ರಸ್ತೆ ಮತ್ತು ಎಸ್‌ಡಿಎಸ್ ಸ್ಯಾನಿಟೋ ರಿಯಂ ಜಾಗ |

ಜಿ.ಎಸ್. ನಾರಾಯಣಸ್ವಾಮಿ

ಪಿ.ಆರ್. 604 ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

## ಅಂತಿಮ ಅಧಿಸೂಚನೆ

### ನಂ. ಕೆ.ಎಸ್.ಎ.ಸಿ.ಆರ್/7/98-99, ದಿನಾಂಕ: 7ನೇ ಏಪ್ರಿಲ್ 2004

ನಂ. ಕೆ.ಎಸ್.ಎ.ಸಿ.ಆರ್/7/98-99, ದಿನಾಂಕ: 6.10.1998ರ ಪ್ರಿಲಿಮಿನರಿ ಅಧಿಸೂಚನೆಯನ್ನು ದಿನಾಂಕ: 05.11.1998ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಿ, ಸದರಿ ಅಧಿಸೂಚನೆಯ ಷೆಡ್ಯೂಲ್‌ನಲ್ಲಿರುವ ತಿಮ್ಮರಾಯಪ್ಪ ಗಾರ್ಡನ್ ಕೊಳಚೆ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ನಿರ್ಮೂಲನೆ ಮತ್ತು ಅಭಿವೃದ್ಧಿ) ಕಾಯ್ದೆ 1973ರ ಸೆಕ್ಷನ್ 3 ರಡಿಯಲ್ಲಿ ಪ್ರಾರಂಭಿಕವಾಗಿ ಕೊಳಚೆ ಪ್ರದೇಶವೆಂದು ಘೋಷಿಸಿ ಸಂಬಂಧಿಸಿದವರಿಂದ ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿತ್ತು.

ಸದರಿ ಪ್ರಿಲಿಮಿನರಿ ಅಧಿಸೂಚನೆಗೆ ಪ್ರಶ್ನಿತ ಕೊಳಚೆ ಪ್ರದೇಶವಿರುವ ಜಮೀನಿನ ಮಾಲೀಕರೆಂದು ಹೇಳಿಕೊಂಡು 1) ಎಸ್.ಸಿ. ಗುಂಡಪ್ಪ, 2) ಮುನಿಸ್ವಾಮಿ, 3) ತಿಮ್ಮಯ್ಯ ರವರು ಹಾಗೂ ಅವರ ಹಕ್ಕುದಾರರು ಆಕ್ಷೇಪಣೆಗಳನ್ನು ಸಲ್ಲಿಸಿರುತ್ತಾರೆ. ಅವರ ಆಕ್ಷೇಪಣೆಗಳ ಬಗ್ಗೆ ವಿಚಾರಣೆ ನಡೆಸಲಾಗಿದೆ. ಪ್ರಶ್ನಿತ ಜಮೀನು ಮೂಲತಃ ತೋಟಿ ಇನಾಂ ಜಮೀನಾಗಿದ್ದು, ಹಲವರಿಗೆ ರಿಗ್ರಾಂಟ್ ಆಗಿರುತ್ತದೆ. ಈ ಪ್ರಕರಣದ ವಿಚಾರಣೆಯಲ್ಲಿ ವಾದಿ-ಬೋರ್ಡ್ ಪರ ಪ್ರಾಜೆಕ್ಟ್ ಮ್ಯಾನೇಜರ್‌ರವರು ಪ್ರಶ್ನಿತ ಕೊಳಚೆ ಪ್ರದೇಶವನ್ನು

ಕೊಳಚೆ ಪ್ರದೇಶವೆಂದು ಅಂತಿಮವಾಗಿ ಘೋಷಿಸಲು ಕೋರಿರುತ್ತಾರೆ. ಪ್ರತಿವಾದಿಗಳ ಪರ ಹಾಜರಿದ್ದ ನ್ಯಾಯವಾದಿಗಳು ಸಹಾ ಪ್ರಶ್ನಿತ ಪ್ರದೇಶವನ್ನು ಕೊಳಚೆ ಪ್ರದೇಶವೆಂದು ಘೋಷಿಸಲು ತಮ್ಮ ಅಭ್ಯಂತರವಿಲ್ಲವೆಂದು ತಿಳಿಸಿರುತ್ತಾರೆ.

ಆದ್ದರಿಂದ ಕರ್ನಾಟಕ ಕೊಳಚೆ ಪ್ರದೇಶಗಳ (ನಿರ್ಮೂಲನೆ ಮತ್ತು ಅಭಿವೃದ್ಧಿ) ಕಾಯ್ದೆ 1973ರ ಸೆಕ್ಷನ್ 3 ರಡಿಯಲ್ಲಿ ದತ್ತವಾಗಿರುವ ಅಧಿಕಾರದಂತೆ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಅಂತಿಮವಾಗಿ "ಕೊಳಚೆ ಪ್ರದೇಶ" ವೆಂದು ಘೋಷಿಸಿರುತ್ತೇನೆ.

**ಷೆಡ್ಯೂಲ್**

**ಬೆಂಗಳೂರು ನಗರ ವ್ಯಾಪ್ತಿಯ ತಿಮ್ಮರಾಯಪ್ಪ ಗಾರ್ಡನ್-ನೀಲಸಂದ್ರ ಕೊಳಚೆ ಪ್ರದೇಶದ ಚೆಕ್ಕುಬಂದಿ ಮತ್ತು ಹದ್ದುಬಸ್ತು ತಃಖ್ತೆ:**

| ಕ್ರ. ಸಂ. | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಮಾಲೀಕರ ಹೆಸರು | ಸ.ನಂ. | ವಿಸ್ತೀರ್ಣ (ಚ.ಅ) | ಚೆಕ್ಕು ಬಂದಿಗಳು | | | |
|---|---|---|---|---|---|---|---|---|
| | | | | | ಪೂರ್ವಕ್ಕೆ | ಪಶ್ಚಿಮಕ್ಕೆ | ಉತ್ತರಕ್ಕೆ | ದಕ್ಷಿಣಕ್ಕೆ |
| 1 | ತಿಮ್ಮರಾಯಪ್ಪ ಗಾರ್ಡನ್, ನೀಲಸಂದ್ರ, ಬೆಂಗಳೂರು ಉತ್ತರ ತಾಲ್ಲೂಕು | ಇನಾಂತಿ: 1) ಸಾದಪ್ಪ 2) ತಿಮ್ಮರಾಯಪ್ಪ 3) ತಿಮ್ಮಯ್ಯ | 56 | 19035 ಚ.ಅ.ಗಳು ಅಥವಾ 1768.35 ಚ.ಮೀ.ಗಳು | ಖಾಸಗಿ ಆಸ್ತಿಗಳು | ಖಾಸಗಿ ಆಸ್ತಿಗಳು | ಬಜಾರ್ ರಸ್ತೆಯಿಂದ ಬರುವ ರಸ್ತೆ | ಖಾಸಗಿ ಜಮೀನು ಗಳು |

**ಜಿ.ಎಸ್. ನಾರಾಯಣಸ್ವಾಮಿ**

ಪಿ.ಆರ್. 605 ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಬೆಳಗಾಂವ ಜಿಲ್ಲೆ ಇವರ ನ್ಯಾಯಾಲಯದಲ್ಲಿ**

**ಪ್ರಕರಣ ಸಂಖ್ಯೆ: ಪಿ.ಎಸ್.ಐ. ಕಾಕತಿ ಪೊಲೀಸ್ ಠಾಣೆ, ಬೆಳಗಾಂವ**

**ಇವರ ಪ್ರಥಮ ಮಾಹಿತಿ ವರದಿ ಸಂಖ್ಯೆ: 78/98, ದಿನಾಂಕ: 1.5.1999**

**ಆದೇಶ ಸಂಖ್ಯೆ: ಇಎಕ್ಸ್‌ಇ/ಡಿಟಿಸಿಆರ್/ಸಿಆರ್‌ಎಂ/429/98-99, ದಿನಾಂಕ: 26ನೇ ಫೆಬ್ರವರಿ 2004**

**ಉಪಸ್ಥಿತರು:** ಶ್ರೀ ಪಿ.ಎನ್. ಮುರಗೋಡ, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ಬೆಳಗಾಂವ ಜಿಲ್ಲೆ, ಬೆಳಗಾಂವ.

**ಫಿರ್ಯಾದುದಾರರು:**
1) ಶ್ರೀ ಪಿ.ಬಿ. ಬಾರ್ಕಿ, ಪಿ.ಎಸ್.ಐ. ಕಾಕತಿ, ಪಿ.ಎಸ್. ಟಿಳಕವಾಡಿ ಪಿ.ಎಸ್. (ಫಿರ್ಯಾದಿ)
2) ಕೆ. ನಾಗರಾಜ, ಸರ್ಕಲ್ ಪೊಲೀಸ್ ಇನ್ಸ್‌ಪೆಕ್ಟರ್ ಬೆಳಗಾಂವ ರೂರಲ್, ಕಾಕತಿ ಪೊಲೀಸ್ ಠಾಣೆ (ಫಿರ್ಯಾದಿ)

ವಿರುದ್ಧ

**ಆರೋಪಿತರು:**
1) ಶ್ರೀ ಬಸವರಾಜ ಅರ್ಜುನ ಮುಕ್ಕನ್ನವರ, ಸಾ: ಹುಕ್ಕೇರಿ - ವಾಹನ ಮಾಲೀಕರು
2) ಶ್ರೀ ಮಹಾದೇವ ಭರಮಪ್ಪಾ ನಿಲಜಗಿ ಸಾ: ಸುಣಗಾರಗಲ್ಲಿ, ಹುಕ್ಕೇರಿ
3) ಶ್ರೀ ಇಮ್ರಾನ್ ಕರೀಮಸಾಬ ಮುಜಾವರ, ಸಾ: ಗಜಬರವಾಡಿ, ಹುಕ್ಕೇರಿ - ಡ್ರೈವರ್

**ಪ್ರಸ್ತಾವನೆ:**

ದಿನಾಂಕ: 1.5.1999 ರಂದು ಈ ಪ್ರಕರಣದ ಫಿರ್ಯಾದಿಯಾದ ಶ್ರೀ ಕೆ. ನಾಗರಾಜ ಸಿ.ಪಿ.ಐ. ಬೆಳಗಾಂವ ರೂರಲ್, ಕಾಕತಿ ಇವರು ಅಜಮಾಸ ಮಧ್ಯಾಹ್ನ 12.00 ಅವರ್ಸ್ ಸುಮಾರಕ್ಕೆ ಅವರು ತಮ್ಮ ಕಾರ್ಯಾಲಯದಲ್ಲಿ ಇದ್ದಾಗ ಖಚಿತವಾದ ಬಾತ್ಮಿ ಬಂದಿದ್ದು, ಒಂದು ಟೆಂಪೋ ಟ್ರ್ಯಾಕ್ಸ್ ಜೀಪ್ ಗಾಡಿ ನಂ. ಕೆಎ-23-ಎಂ-2409 ಗಾಡಿಯಲ್ಲಿಂದ ಬೇಕಾಯ್ದೆಶೀರ ರೀತಿಯಿಂದ ಮದ್ಯದ ಕ್ವಾರ್ಟರ್ ಬಾಟಲುಗಳನ್ನು ಬೆಳಗಾಂವದಿಂದ ಸಾಗಾಟ ಮಾಡುತ್ತಿರುವುದು ಅಂತಾ ಬಾತ್ಮಿ ಬಂದ ಪ್ರಕಾರ ಕೂಡಲೇ ಇಬ್ಬರು ಪಂಚರೊಂದಿಗೆ ಹಾಗೂ ಸಿಬ್ಬಂದಿ ಜನರು ಬ.ನಂ. 2094, 2101 ನೇದ್ದವರನ್ನು ಸಂಗಡ ಕರೆದುಕೊಂಡು ಕಾಕತಿ ಪೊಲೀಸ್ ಠಾಣೆ ಹದ್ದಿಯ ಪೈಕಿ ಹೊನಗಾ ಬ್ರಿಜ್ ಹತ್ತಿರ ಹೋಗಿ ವಾಚ್ ಮಾಡುತ್ತ ನಿಂತಾಗ ಅಜಮಾಸ ಮಧ್ಯಾಹ್ನ 13.30 ಅವರ್ಸ್ ಸುಮಾರಕ್ಕೆ ಬೆಳಗಾಂ ಕಡೆಯಿಂದ ಬಿಳಿ ಬಣ್ಣದ ಟ್ರ್ಯಾಕ್ಸ್ ಜೀಪ್ ನಂ. ಕೆಎ-23-ಎಂ-2409 ನೇದ್ದು ಬಂದಿದ್ದು ಅದನ್ನು ನಿಲ್ಲಿಸುವ ಸಲುವಾಗಿ ಡ್ರೈವರ್ ಇವರಿಗೆ ಕೈ ಮಾಡಿದರು, ಆವಾಗ ಸದರ ಗಾಡಿಯ ಡ್ರೈವರನು ಬ್ರಿಜ್ ದಾಟಿ ಗಾಡಿ ತರುಬಿದನು. ಗಾಡಿಯಲ್ಲಿಂದ ಇಳಿದು ಓಡಲಿಕ್ಕೆ ಹತ್ತಿದನು. ಅವನಿಗೆ ಹಿಡಿಯಲು ಪ್ರಯತ್ನ ಮಾಡಿದರೂ ಅವನು ಸಿಗಲಿಲ್ಲ. ಗಾಡಿಯನ್ನು ಹಿಂದಿನ ಬಾಜುಕ್ಕೆ ಇಬ್ಬರು ಕುಳಿತಿದ್ದರು. ಅವರಿಗೆ ಹಿಡಿದುಕೊಂಡು ಅವರ ಹೆಸರು ಕೇಳಲು ಅವರು ತಮ್ಮ ತಮ್ಮ ಹೆಸರುಗಳು 1) ಬಸವರಾಜ ಅರ್ಜುನ ಮುಕ್ಕನ್ನವರ, ಸಾ: ಹುಕ್ಕೇರಿ ಹಳ್ಳದಕೇರಿ ಅಂತಾ ಹೇಳಿದನು, 2) ಮಹಾದೇವ ಭೀಮಪ್ಪಾ ನಿಲಜಗಿ, ಸಾ: ಸುಣಗಾರಗಲ್ಲಿ, ಹುಕ್ಕೇರಿ ಅಂತಾ ಹೇಳಿದನು. ಸದರಿಯವರಿಗೆ ಓಡಿ ಹೋದವನು ಡ್ರೈವರ್ ಹೆಸರು ಕೇಳಲಾಗಿ ಇಮ್ರಾನ್ ಕರೀಮಸಾಬ ಮುಜಾವರ, ಸಾ: ಗಜಬರವಾಡಿ ತಾ: ಹುಕ್ಕೇರಿ ಅಂತಾ ಹೇಳಿದರು. ಸದರಿ ಟೆಂಪೋ ಟ್ರ್ಯಾಕ್ಸ್ ಜೀಪ್ ಗಾಡಿಯನ್ನು ತಪಾಸಣೆ ಮಾಡಿ ನೋಡಲಾಗಿ ಅದರಲ್ಲಿ 11 ರಟ್ಟಿನ ಬಾಕ್ಸ್‌ಗಳು ಇದ್ದು ಅವುಗಳಲ್ಲಿ ಏನು ಇದೆ ಅಂತಾ ವಿಚಾರಣೆ ಮಾಡಲು ಅವು ಮದ್ಯ ತುಂಬಿದ ಕ್ವಾರ್ಟರ್ ಬಾಟಲುಗಳು ಇರುತ್ತವೆ ಅಂತಾ ಹೇಳಿದರು. ಅವುಗಳ ಬಗ್ಗೆ ಏನಾದರೂ ಕಾಗದ ಪತ್ರಗಳು ಇವೆ ಹೇಗೆ ಮತ್ತು ಅವುಗಳನ್ನು ಎಲ್ಲಿಂದ ತೆಗೆದುಕೊಂಡು ಬಂದಿದ್ದೀರಿ ಎಲ್ಲಿಗೆ ಒಯ್ಯುತ್ತಿದ್ದೀರಿ ಅಂತಾ ಕೇಳಲು ಅವರು ಯಾವುದೇ ತರದ ಸಮರ್ಪಕ ಉತ್ತರ ಕೊಡಲಿಲ್ಲ. ವಿವರವು ಈ ಕೆಳಗಿನಂತೆ ಇರುತ್ತವೆ.

1. ಶ್ಯಾಮಸನ್ ತ್ರಿಎಕ್ಸ್ ರಮ್ ಕ್ವಾರ್ಟರ್ ಬಾಟ್ಲಿಗಳು ಇದ್ದ ಬಾಕ್ಸ್‌ಗಳು ಎರಡು ಪ್ರತಿಯೊಂದರಲ್ಲಿ 48 ಬಾಟ್ಲಿಗಳು
2. ರಾಯಲ್ ಕ್ಲಾಸ್ ವ್ಹಿಸ್ಕಿ ಕ್ವಾರ್ಟರ್ ಬಾಟಲುಗಳು ಇದ್ದ ಬಾಕ್ಸ್ ಒಂದು (48 ಕ್ವಾರ್ಟರ್ ಬಾಟ್ಲಿಗಳು)
3. ರಾಜಾ ವಿಸ್ಕಿ ತುಂಬಿದ ಕ್ವಾರ್ಟರ್ ಬಾಟ್ಲಿಗಳು ಪ್ರತಿಯೊಂದರಲ್ಲಿ 48 ಬಾಟಲಿಗಳಂತೆ ಒಟ್ಟು 2 ಬಾಕ್ಸ್
4. ಖೋಡೇಸ್ ತ್ರಿಎಕ್ಸ್ ರಮ್ ಕ್ವಾರ್ಟರ್ ಬಾಟಲುಗಳು ಪ್ರತಿಯೊಂದರಲ್ಲಿ 48 ಬಾಟಲಿಗಳಂತೆ ಒಟ್ಟು 2 ಬಾಕ್ಸ್, ಡಿಲಕ್ಸ್ ಬ್ರ್ಯಾಂಡಿ ಕ್ವಾರ್ಟರ್ ಬಾಟ್ಲಿಗಳು ಇದ್ದ ಬಾಕ್ಸ್ ಒಂದು (48 ಕ್ವಾರ್ಟರ್ ಬಾಟಲಿಗಳು)
5. ಡಿಲೈಟ್ ವ್ಹಿಸ್ಕಿ ಕ್ವಾರ್ಟರ್ ಬಾಟ್ಲಿಗಳು ಇದ್ದ ಬಾಕ್ಸ್‌ಗಳು ಎರಡು ಪ್ರತಿಯೊಂದರಲ್ಲಿ 48 ಬಾಟ್ಲಿಗಳು
6. ಹೈವರ್ಡ್ಸ್ ಫಾಯಿನ್ ವ್ಹಿಸ್ಕಿ ಕ್ವಾರ್ಟರ್ ಬಾಟ್ಲಿಗಳು ಇದ್ದು ಒಂದು ರಟ್ಟಿನ ಬಾಕ್ಸ್

ನಂತರ ಮೇಲಿನ 11 ಬಾಕ್ಸ್‌ಗಳಿಂದ ಒಟ್ಟು (7) ಕ್ವಾರ್ಟರ್ ಬಾಟ್ಲಿಗಳನ್ನು ಸ್ಯಾಂಪಲ್ ಅಂತಾ ತೆಗೆದು ಹಾಗೂ ಯಾವತ್ತೂ ಮಾಲನ್ನು ಜಪ್ತಿ ಮಾಡಿ ಟೆಂಪೋ ಟ್ರ್ಯಾಕ್ಸ್ ಜೀಪ್ ನಂ. ಕೆಎ-23-ಎಂ-2409 ನೇದ್ದನ್ನು ಜಪ್ತಿ ಮಾಡಿ ಬಸವರಾಜ ಮುಕ್ಕನ್ನವರ ಮತ್ತು ಮಹಾದೇವ ನಿಲಜಗಿ ಇವರನ್ನು ದಸ್ತಗಿರಿ ಮಾಡಿದರು.

ಸದರಿ ಮೇಲೆ ನಮೂದು ಮಾಡಿದ ಟ್ರ್ಯಾಕ್ಸ್ ಜೀಪ್ ಗಾಡಿಯ ಡ್ರೈವರ್ ಇಮ್ರಾನ್ ಮುಜಾವರ, ಸಾ: ಹುಕ್ಕೇರಿ 2) ಮಹಾದೇವ ನಿಲಜಗಿ 3) ಬಸವರಾಜ ಮುಕ್ಕನ್ನವರ ಮೂರು ಜನರು ಹುಕ್ಕೇರಿ ಇವರು ಕೂಡಿಕೊಂಡು ಬೇಕಾಯ್ದೆಶೀರ ರೀತಿಯಿಂದ ಯಾವುದೇ ಪರ್ಮಿಟ್ ಇಲ್ಲದೆ ಟ್ರ್ಯಾಕ್ಸ್ ಜೀಪ್ ಗಾಡಿಯಲ್ಲಿ ಜಪ್ತಿ ಮಾಡಿದ ಯಾವತ್ತೂ ಮದ್ಯದ ಬಾಟ್ಲಿಗಳನ್ನು ಇಟ್ಟುಕೊಂಡು ಅಕ್ರಮ ಸಾಗಾಟ ಮಾಡುವಾಗ ಸಿಕ್ಕ ಅಪರಾಧಕ್ಕಾಗಿ ಸಿ.ಪಿ.ಐ. ಕಾಕತಿ ಇವರ ಫಿರ್ಯಾದದ ಮೇರೆಗೆ ಪಿ.ಎಸ್.ಐ. ಕಾಕತಿ ಇವರು ಆರೋಪಿತರ ಮೇಲೆ ಅಬಕಾರಿ ಕಾಯ್ದೆ ಕಲಂ 34ರ ಪ್ರಕಾರ ಗುನ್ನೆ ನಂ. 78/98 ದಿನಾಂಕ: 1.5.1999 ನೇದ್ದನ್ನು ದಾಖಲಿಸಿಕೊಂಡಿದ್ದಾರೆ. ಮತ್ತು ಮುದ್ದೆ ಮಾಲಿನ ಬಗ್ಗೆ ಮಾನ್ಯ ನ್ಯಾಯಾಲಯಕ್ಕೂ ಮತ್ತು ಅಧಿಕೃತ ಅಧಿಕಾರಿಯವರಿಗೆ ವರದಿ ಸಲ್ಲಿಸಿರುತ್ತಾರೆ.

ನಂತರ ಶ್ರೀ ಬಿ.ಆರ್. ಕಾದ್ರೊಳ್ಳಿ, ವಕೀಲರು ಇವರು ವಾಹನ ಮಾಲೀಕರಾದ ಸದಾಶಿವ ಅರ್ಜುನ ಮುಕ್ಕನ್ನವರ ಇವರ ಪರವಾಗಿ ತಮ್ಮ ಅರ್ಜಿ ಸಲ್ಲಿಸಿ ವಾಹನ ಮಧ್ಯಂತರ ಬಿಡುಗಡೆಗಾಗಿ ವಿನಂತಿಸಿಕೊಂಡಿದ್ದರು. ನಂತರ ಈ ಪ್ರಾಧಿಕಾರದಿಂದ ಅಬಕಾರಿ ಕಾಯ್ದೆ ಕಲಂ 43 (ಬಿ) ಪ್ರಕಾರ ವಾಹನ ಮಾಲೀಕರಿಗೆ ಕಾರಣ ಕೇಳುವ ನೋಟೀಸು ದಿನಾಂಕ: 9.10.2001 ರಂದು ನೀಡಲಾಯಿತು. ವಾಹನ ಮಾಲೀಕರು ಸದರಿ ನೋಟೀಸನ್ನು ದಿನಾಂಕ: 20.10.2001 ರಂದು ಪಡೆದಿರುತ್ತಾರೆ. ದಿನಾಂಕ: 6.5.1999 ರಂದು ಸರಕಾರಿ ಅಭಿಯೋಜಕರು ತಮ್ಮ ಲಿಖಿತ ತಕರಾರು ಅರ್ಜಿ ಸಲ್ಲಿಸಿ ವಾಹನ ಬಿಡುಗಡೆ ಮಾಡಬಾರದು ಅಂತಾ ತಮ್ಮ ತಕರಾರನ್ನು ಸಲ್ಲಿಸಿದ್ದಾರೆ.

ಸದರಿ ವಾಹನವು ಮಳೆ, ಗಾಳಿ, ಬಿಸಿಲಿಗೆ ಸಿಕ್ಕು ಹಾಳಾಗುವುದರಿಂದ ಸದರಿ ವಾಹನವನ್ನು ಸಾಕಷ್ಟು ಭದ್ರತೆಯೊಂದಿಗೆ ಅಂದರೆ ಬ್ಯಾಂಕ್ ಗ್ಯಾರಂಟಿ ರೂ. 65,000/- ಹಾಗೂ ಇಂಡೆಮ್ನಿಟಿ ಬಾಂಡ್ ಜಾಮೀನು ಸಲ್ಲಿಸಿದ್ದರಿಂದ ಸದರಿ ವಾಹನವನ್ನು ಮಧ್ಯಂತರ ವಶಕ್ಕೆ ಅರ್ಜಿದಾರರಿಗೆ ದಿನಾಂಕ: 13.5.1999 ರಂದು ಬಿಡುಗಡೆ ಮಾಡಲು ಆದೇಶ ಸಂ: ಇಎಕ್ಸ್‌ಇ/ಸಿಆರ್‌ಎಂ/ಡಿಟಿಸಿಆರ್/429/99 ರ ಪ್ರಕಾರ ತಾತ್ಕಾಲಿಕ ಬಿಡುಗಡೆ ಮಾಡಲಾಗಿದೆ.

ನಂತರ ಪ್ರಕರಣದ ವಿಚಾರಣೆಯನ್ನು ಪ್ರಾರಂಭಿಸಿ ಸರಕಾರದ ಪರವಾಗಿ ಫಿರ್ಯಾದಿ, ತನಿಖಾಧಿಕಾರಿ, ಪಂಚರ ಹೇಳಿಕೆಯನ್ನು ಪಡೆಯಲಾಯಿತು. ಹಾಗೂ 6 ದಾಖಲೆಗಳನ್ನು ಗುರುತಿಸಲಾಗಿದೆ.

ಈ ಪ್ರಕರಣದಲ್ಲಿ ಸರ್ಕಾರದ ಪರವಾಗಿ ಒದಗಿಸಲಾಗಿರುವ ಸಾಕ್ಷ್ಯಾಧಾರದಿಂದ ಈ ಕೆಳಗಿನ ವಿವಾದಾಂಶಗಳನ್ನು ತೀರ್ಮಾನಿಸಬೇಕಾಗಿರುವುದು ಅಗತ್ಯವಾಗಿರುವುದರಿಂದ ಪರಿಶೀಲನಾಂಶಗಳು ಈ ಕೆಳಗಿನಂತಿರುತ್ತವೆ.

1. ದಿನಾಂಕ: 1.5.1999 ರಂದು ಟೆಂಪೋ ಟ್ರ್ಯಾಕ್ಸ್ ನಂ. ಕೆಎ-23-ಎಂ-2409 ದಲ್ಲಿ ಮದ್ಯವನ್ನು ಸಾಗಾಟ ಮಾಡಲಾಗಿದೆಯೇ?
2. ಸದರಿ ವಾಹನದಲ್ಲಿ ಮದ್ಯದ ಸಾಗಾಟವನ್ನು ತಮ್ಮ ತಿಳುವಳಿಕೆಗೆ ಬಾರದಂತೆ ಮಾಡಲಾಗಿತ್ತು ಎಂದು ವಾಹನ ಮಾಲೀಕರು ಸಿದ್ದಪಡಿಸಿದ್ದಾರೆಯೇ?
3. ಜಪ್ತಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೆ?

ಈ ಮೇಲೆ ತಿಳಿಸಿದ ಪರಿಶೀಲನಾಂಶಗಳನ್ನು ಲಭ್ಯವಿರುವ ಸಾಕ್ಷ್ಯಾಧಾರದ ಮೇಲೆ ಈ ಕೆಳಗಿನಂತೆ ಉತ್ತರಿಸಿರುತ್ತೇನೆ.

ಒಂದನೇಯ ಅಂಶವನ್ನು ಗುಣಾತ್ಮಕವಾಗಿ, ಎರಡನೆಯ ಅಂಶವನ್ನು ನಕಾರಾತ್ಮಕವಾಗಿ ಹಾಗೂ ಮೂರನೆಯ ಅಂಶವನ್ನು ಕೊನೆಯ ಆದೇಶದಂತೆ.

ಪ್ರಾ.ಸಾ-1 ರಾದ ಶ್ರೀ ಕೆ. ನಾಗರಾಜು, ಸಿ.ಪಿ.ಐ. ಅಥಣಿ ಇವರು ಈ ಪ್ರಾಧಿಕಾರದ ಮುಂದೆ ದಿನಾಂಕ: 7.2.2002 ರಂದು ಹಾಜರಾಗಿ ತಮ್ಮ ಹೇಳಿಕೆಯನ್ನು ನೀಡಿದ್ದಾರೆ. ತಮ್ಮ ಹೇಳಿಕೆಯಲ್ಲಿ ಸದರಿಯವರು ಡಿಸೆಂಬರ್-98 ರಿಂದ ಜೂನ್-2000 ರ ವರೆಗೆ ಬೆಳಗಾಂವ ಗ್ರಾಮೀಣ ವೃತ್ತದಲ್ಲಿ ಪೊಲೀಸ್ ಇನ್ಸ್‌ಪೆಕ್ಟರ್ ಅಂತಾ ಕಾರ್ಯ ನಿರ್ವಹಿಸಿದ್ದಾಗಿ ತಿಳಿಸಿ ಈ ಪ್ರಕರಣದಲ್ಲಿ ಸದರಿಯವರು ಫಿರ್ಯಾದಿ ಇರುವುದಾಗಿ ತಿಳಿಸಿದ್ದಾರೆ. ಸದರಿಯವರು ದಿನಾಂಕ: 1.5.1999 ರಂದು ತಮ್ಮ ಸಿಬ್ಬಂದಿ ಹಾಗೂ ಪಂಚರೊಂದಿಗೆ ಬೆಳಗಾಂವ ತಾಲ್ಲೂಕಿನ ಹೊನಗಾ ಬ್ರಿಜ್ ಹತ್ತಿರ ವಾಚ್ ಮಾಡುತ್ತಿರುವಾಗ ಸುಮಾರು ಬೆಳಿಗ್ಗೆ 1.30 ರ ಸುಮಾರಿಗೆ ಬೆಳಗಾಂವ ಕಡೆಯಿಂದ ಬಿಳಿ ಬಣ್ಣದ ಟ್ರ್ಯಾಕ್ಸ್ ವಾಹನ ನಂ. ಕೆಎ-23-ಎಂ-2409 ನೇದ್ದು ಬಂದಿದ್ದು, ಅದನ್ನು ನಿಲ್ಲಿಸಲು ಕೈ ಮಾಡಿದೆವು. ಆದರ ಚಾಲಕನು ಬ್ರಿಜ್ ದಾಟಿ ಗಾಡಿ ನಿಲ್ಲಿಸಿ ಓಡಹತ್ತಿದನು. ಬೆನ್ನು ಹತ್ತಿದರೂ ಸಿಗಲಿಲ್ಲ. ವಾಹನದಲ್ಲಿಯ ಇಬ್ಬರು ಹೆಸರು ಕೇಳಲಾಗಿ ಒಬ್ಬನು ಬಸವರಾಜ ಅರ್ಜುನ ಮುಕ್ಕನ್ನವರ, ಸಾ: ಹುಕ್ಕೇರಿ ಮತ್ತು ಇನ್ನೊಬ್ಬನು ಮಹಾದೇವ ಭೀಮಪ್ಪಾ ನಿಲಜಗಿ, ಸಾ: ನಿಲಜಗಿ ಅಂತಾ ಹೇಳಿದನು. ವಾಹನದಲ್ಲಿ 11 ರಟ್ಟಿನ ಪೆಟ್ಟಿಗೆಗಳಲ್ಲಿ ಮದ್ಯದ ಬಾಟ್ಲಿಗಳು ಇದ್ದವು. ಅವುಗಳನ್ನು ಎಲ್ಲಿಂದ ಎಲ್ಲಿಗೆ ಒಯ್ಯುತ್ತಿದ್ದಿರಿ ಅಂತಾ ಕೇಳಲು ಸಮರ್ಪಕ ಉತ್ತರ ಕೊಡಲಿಲ್ಲ. ಅವುಗಳ ಸಾಗಾಟದ ಬಗ್ಗೆ ಸರಕಾರದ ಅನುಮತಿ ಪತ್ರ ಕೇಳಲು ಇಲ್ಲ ಅಂತಾ ಹೇಳಿದನು. ಆದ್ದರಿಂದ ಆರೋಪಿತರು ಸದರಿ ವಾಹನದಲ್ಲಿ ಸರಕಾರಕ್ಕೆ ಕರಕೊಡದ ಮದ್ಯವನ್ನು ಅಕ್ರಮವಾಗಿ ಸಾಗಾಟ ಮಾಡುತ್ತಿರುವುದು ಖಚಿತವಾಗಿತು.

ಪಂಚರ ಸಮಕ್ಷಮ ಪರಿಶೀಲಿಸಿ ನೋಡಲು 1) ಶ್ಯಾಮಸನ್ ರಮ್ ಮದ್ಯದ ಬಾಕ್ಸ್‌ಗಳು 2, 2) ರಾಯಲ್ ವ್ಹಿಸ್ಕಿ ಮದ್ಯದ ಬಾಕ್ಸ್ ಒಂದು, 3) ರಾಜಾ ವ್ಹಿಸ್ಕಿ ಮದ್ಯದ 2 ಬಾಕ್ಸ್, 4) ಖೋಡೇಸ್ ತ್ರಿಎಕ್ಸ್ ರಮ್ 2 ಬಾಕ್ಸ್, 5) ಡಿಲಕ್ಸ್ ಬ್ರ್ಯಾಂಡಿ ಬಾಕ್ಸ್ ಒಂದು, 6) ಡಿಲೈಟ್ ವ್ಹಿಸ್ಕಿ 2 ಬಾಕ್ಸ್, 7) ಹೈವರ್ಡ್ಸ್ ವ್ಹಿಸ್ಕಿ ಒಂದು ಬಾಕ್ಸ್ ಈ ರೀತಿ 11 ರಟ್ಟಿನ ಪೆಟ್ಟಿಗೆಗಳಲ್ಲಿ ಪ್ರತಿಯೊಂದರಲ್ಲಿ 180 ಎಂ.ಎಲ್‌ದ 48 ಬಾಟ್ಲಿಗಳಂತೆ ಮೇಲ್ಕಂಡ ಮದ್ಯ ಕಂಡು ಬಂದಿತು ಅವುಗಳಿಂದ ಪ್ರತಿಯೊಂದು ನಮೂನೆಯ ಮದ್ಯದ ಒಂದು ಬಾಟ್ಲಿಯಂತೆ 7 ಮದ್ಯದ ಬಾಟ್ಲಿಗಳನ್ನು ರಾಸಾಯನಿಕ ಪರೀಕ್ಷೆಗಾಗಿ ಪ್ರತ್ಯೇಕ ಮಾದರಿ ತೆಗೆದರು. ವಾಹನ ಮತ್ತು ಮದ್ಯವನ್ನು ಪಂಚರ ಸಮಕ್ಷಮ ಜಪ್ತಿ ಮಾಡಿ ಇಬ್ಬರು ಆರೋಪಿತರನ್ನು ದಸ್ತಗಿರಿ ಮಾಡಿದರು. ಸದರಿ ಪಂಚನಾಮೆಯ ದೃಢೀಕೃತ ಫೋಟೋ ಪ್ರತಿ ನಿಪಿ-1 ಹಾಗೂ ಅವರ ಸಹಿ ನಿಪಿ-1(ಎ) ಅಂತಾ ಗುರುತಿಸಲಾಯಿತು. ನಂತರ ಆರೋಪಿತರು ಹಾಗೂ ಮುದ್ದೆ ಮಾಲಿನೊಂದಿಗೆ ಕಾಕತಿ ಪೊಲೀಸ್ ಠಾಣೆಗೆ ಬಂದು ಸರಕಾರದ ಪರವಾಗಿ ಫಿರ್ಯಾದಿಯಾಗಿ ಆರೋಪಿತರ ವಿರುದ್ಧ ಫಿರ್ಯಾದನ್ನು ಪಿ.ಎಸ್.ಐ. ಮುಂದೆ ಸಲ್ಲಿಸಿದರು. ಮತ್ತು ಮುದ್ದೆ ಮಾಲು ಆರೋಪಿತರನ್ನು ಮುಂದಿನ ತನಿಖೆಗಾಗಿ ಅವರಿಗೆ ಒಪ್ಪಿಸಿದರು. ಫಿರ್ಯಾದಿನ ದೃಢೀಕೃತ ಫೋಟೋ ಪ್ರತಿ ನಿಪಿ-2 ಮತ್ತು ಅವರ ಸಹಿ ನಿಪಿ-2(ಎ) ಅಂತಾ ಗುರುತಿಸಲಾಯಿತು. ಅವರ ಫಿರ್ಯಾದನ್ನು ಕಾಕತಿ ಪೊಲೀಸ್ ಠಾಣೆ ಗುನ್ಹೆ ನಂ. 78/99 ರಲ್ಲಿ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 34ರ ಅಡಿಯಲ್ಲಿ ದಾಖಲು ಮಾಡಿಕೊಳ್ಳಲಾಗಿದೆ. ಮೂಲ ಫಿರ್ಯಾದು ಹಾಗೂ ಮೂಲ ಪಂಚನಾಮೆಯನ್ನು ನ್ಯಾಯಾಲಯಕ್ಕೆ ಸಲ್ಲಿಸಲಾಗಿದೆ. ವಾಹನವನ್ನು ಮಾಲೀಕರ ಮಧ್ಯಂತರ ವಶಕ್ಕೆ ಕೊಡಲಾಗಿದ್ದು, ಈ ದಿನ ಹಾಜರುಪಡಿಸಿರುವುದಿಲ್ಲ. ಅದರ ಗುರುತಿನ ಬಗ್ಗೆ ತಮ್ಮ ತಕರಾರು ಇರುವುದಿಲ್ಲ ಅಂತಾ ವಾಹನದ ಮಾಲೀಕರು ಪ್ರಾಧಿಕಾರದ ಮುಂದೆ ಹೇಳಿರುತ್ತಾರೆ.

ನಂತರ ಸದರಿಯವರು ವಾಹನ ಮಾಲೀಕರ ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತ, ದಿನಾಂಕ: 1.5.1999 ರಂದು ಕಛೇರಿಯಲ್ಲಿದ್ದಾಗ ಬಾತ್ಮಿ ಬಂದ ಬಗ್ಗೆ ಅವರು ವಯಕ್ತಿಕ ಡೈರಿಯಲ್ಲಿ ನಮೂದು ಮಾಡಿರುತ್ತಾರೆ. ಸುಮಾರು 15 ಮಿನಿಟಿನಿಂದ ಅರ್ಧ ತಾಸು ರಸ್ತೆ ವಾಚ್ ಮಾಡಿರಬಹುದು. ಆ ದಿನ ಜಪ್ತ ಮಾಡಿದ ವಾಹನವನ್ನು ಬಿಟ್ಟು ಬೇರೆ ವಾಹನ ತಪಾಸಣೆ ಮಾಡಿಲ್ಲ. ಪಂಚರನ್ನು ಸಿಬ್ಬಂದಿಯವರು ಕರೆದುಕೊಂಡು ಬಂದಿರುತ್ತಾರೆ. ವಾಹನ ಶೋಧಿಸುವ ಬಗ್ಗೆ ನ್ಯಾಯಾಲಯದಿಂದ ಶೋಧನಾ ವಾರಂಟ್ ಪಡೆದಿರುವುದಿಲ್ಲ. ವೇಳೆಯ ಅಭಾವದಿಂದ ಮತ್ತು ಆರೋಪಿತರು ಮುದ್ದೆ ಮಾಲಿನೊಂದಿಗೆ ಪರಾರಿ ಆಗುವ ಸಂಭವವಿರುವುದರಿಂದ ಶೋಧನಾ ವಾರಂಟ್ ಪಡೆದಿರುವುದಿಲ್ಲ. ಈ ಕಾರಣಗಳನ್ನು ಫಿರ್ಯಾದಿನಲ್ಲಿ ಅಥವಾ ಪಂಚನಾಮೆಯಲ್ಲಿ ನಮೂದಿಸಿಲ್ಲ. ಜಪ್ತಿ ಮಾಡಿದ ವಾಹನವು ಪ್ರಯಾಣಿಕರ ವಾಹನವಿರುತ್ತದೆ. ಜಪ್ತಿ ಮಾಡಿದ ಮದ್ಯದ ಬಾಟಲುಗಳ ಮೇಲಿದ್ದ ಮದ್ಯದ ಹೆಸರನ್ನು ಫಿರ್ಯಾದಿನಲ್ಲಿ ನಮೂದು ಮಾಡಿರುವರು. ಆದರೆ ಅದರ ತಯಾರಿಕಾ ಹೆಸರುಗಳನ್ನು ನಮೂದಿಸಿರುವುದಿಲ್ಲ. ಜಪ್ತಿ ಮಾಡಿದ ಮದ್ಯವನ್ನು ಕರ್ನಾಟಕ ರಾಜ್ಯದಲ್ಲಿ ಸಾಗಾಟ ಮಾಡಲು ಸಂಬಂಧಿತ ಅಧಿಕಾರಿಯವರಿಂದ ಪರ್ಮಿಟ್ ಪಡೆಯಬೇಕಾಗುತ್ತದೆ. ಪರ್ಮಿಟ್ ಪಡೆದು ಸಾಗಾಟ ಮಾಡಬಹುದು. ಲೈಸೆನ್ಸ್ ಪಡೆದು ಸಾಗಾಟ ಮಾಡಬಹುದು ಅನ್ನುವುದು ನಿಜ. ಜಪ್ತಾದ ಮದ್ಯದ ಮಾಲೀಕರು ಯಾರು ಎನ್ನುವ ಬಗ್ಗೆ ಆರೋಪಿತರು ಸಮರ್ಪಕ ಉತ್ತರ ಕೊಟ್ಟಿರುವುದಿಲ್ಲ. ಆ ದಿನ ಬಾತ್ಮಿ ಬಂದಿದ್ದು ಮತ್ತು ಸದರಿ ವಾಹನವನ್ನು ಅಕ್ರಮ ಮದ್ಯದ ಸಮೇತ ಹಿಡಿದಿರುತ್ತೇನೆ ಅಂತಾ ಸುಳ್ಳು ಹೇಳುತ್ತಿದ್ದೇನೆ ಎಂದರೆ ಸರಿಯಲ್ಲ. ಜಪ್ತಾದ ವಾಹನದಲ್ಲಿ ಆ ದಿನ ಅಕ್ರಮ ಮದ್ಯ ಸಾಗಾಟ ಮಾಡುತ್ತಿರಲಿಲ್ಲ ಎಂದರೆ ಸರಿಯಲ್ಲ. ಪಂಚನಾಮೆಯನ್ನು ಕಛೇರಿಯಲ್ಲಿ ಅನುಕೂಲ ಆಗುವ ಹಾಗೆ ಬರೆದಿರುತ್ತೇನೆ ಎಂದರೆ ಸರಿಯಲ್ಲ. ಫಿರ್ಯಾದನ್ನು ಹೇಳಿ ಸಿಬ್ಬಂದಿಯಿಂದ ಬೆರಳಚ್ಚು ಮಾಡಿಸಿದ್ದೇನೆ. ಫಿರ್ಯಾದಿಯನ್ನು ಬೆರಳಚ್ಚು ಮಾಡಿದ ಸಿಬ್ಬಂದಿಯ ಹೇಳಿಕೆಯನ್ನು ಪಡೆದಿರುವುದಿಲ್ಲ. ಆ ದಿನ ಮೇಲೆ ಹೇಳಿದಂತೆ ಯಾವುದೇ ಘಟನೆ ನಡೆದಿರುವುದಿಲ್ಲ ಅಂದರೆ ಸರಿಯಲ್ಲ. ಕಛೇರಿಯಲ್ಲಿ ವಾರಸುದಾರರಿಲ್ಲದ ಮದ್ಯವನ್ನು ಉಪಯೋಗಿಸಿ ಆರೋಪಿತರ ವಿರುದ್ಧ ಸುಳ್ಳು ಕೇಸು ಹಾಕಿದ್ದೇನೆ ಎಂದರೆ ಸರಿಯಲ್ಲ ಎಂದು ಹೇಳಿರುತ್ತಾರೆ. ಈ ರೀತಿ ಪಾಟೀ ಸವಾಲಿನಲ್ಲಿ ವಾಹನ ಮಾಲೀಕರ ವಕೀಲರಿಗೆ ಯಾವುದೇ ಪ್ರಯೋಜನ ಆಗಿರುವುದಿಲ್ಲ.

ಶ್ರೀ ಗಂಗಪ್ಪಾ ಮಲ್ಲಪ್ಪಾ ಕೋಟಗಾರ, ಅಬಕಾರಿ ಸಬ್ ಇನ್ಸ್‌ಪೆಕ್ಟರ್, ಉತ್ತರ ಉಪ ವಲಯ ನಂ-2 ಇವರ ಹೇಳಿಕೆಯನ್ನು ದಿನಾಂಕ: 7.2.2002 ರಂದು ಪ್ರಾ.ಸಾ-2 ಆಗಿ ತೆಗೆದುಕೊಳ್ಳಲಾಯಿತು. ಸದರಿಯವರು ತಮ್ಮ ಹೇಳಿಕೆಯನ್ನು ನೀಡುತ್ತಾ ಅವರು ದಿನಾಂಕ: 22.6.1998 ರಿಂದ ಅಬಕಾರಿ ಸಬ್ ಇನ್ಸ್‌ಪೆಕ್ಟರ್, ಉತ್ತರ ಉಪ ವಲಯ ನಂ-2, ಬೆಳಗಾಂವದಲ್ಲಿ ಕೆಲಸ ಮಾಡುತ್ತಿದ್ದು, ಈ ಕೇಸಿನ ತನಿಖೆಯನ್ನು ಪಿ.ಎಸ್.ಐ. ಕಾಕತಿ ಇವರಿಂದ ಪಡೆದುಕೊಂಡಿರುತ್ತೇನೆ. ದಿನಾಂಕ: 20.7.1999 ರಂದು ಜಪ್ತಾದ ಮದ್ಯದ (7) ಮಾದರಿ ಬಾಟ್ಲಿಗಳನ್ನು ಅಬಕಾರಿ ರಕ್ಷಕ ಶ್ರೀ ಎ.ಎಂ. ಚಿಕ್ಕೋಡಿಕರ ಇವರ ಮುಖಾಂತರ ಬೆಂಗಳೂರಿಗೆ ರಸಾಯನಿಕ ಪರೀಕ್ಷೆಗಾಗಿ ಕಳಿಸಿ ದಿನಾಂಕ: 23.7.1999 ರಂದು ರಸಾಯನಿಕ ಪರೀಕ್ಷೆ ಪ್ರಮಾಣ ಪತ್ರ ಮತ್ತು ಮಾದರಿ ಮದ್ಯದ ಬಾಟ್ಲಿಗಳನ್ನು ಹಿಂದಿರುಗಿ ಪಡೆದುಕೊಂಡಿದ್ದಾರೆ. ರಸಾಯನಿಕ ಪರೀಕ್ಷೆ ಪ್ರಮಾಣ ಪತ್ರದ ದೃಢೀಕೃತ ಪ್ರತಿ ನಿಪಿ-3 ಮತ್ತು ಅವರ ಸಹಿ ನಿಪಿ-3(ಎ) ಇರುತ್ತದೆ. ತನಿಖೆ ಮುಗಿಸಿ ದಿನಾಂಕ: 24.4.2000 ರಂದು ನ್ಯಾಯಾಲಯಕ್ಕೆ ದೋಷಾರೋಪಣ ಪತ್ರವನ್ನು ಸಲ್ಲಿಸಿರುತ್ತಾರೆ. ಜಪ್ತಾದ ಮದ್ಯವನ್ನು ಹೊರತುಪಡಿಸಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಮಾನ್ಯ ಅಧಿಕೃತ ಅಧಿಕಾರಿಯವರಿಗೆ ದಿನಾಂಕ: 27.7.1999 ರಂದು ವರದಿ ಸಲ್ಲಿಸಿ ಅವರ ಆದೇಶ ನಂ. ಇಎಕ್ಸ್‌ಇ/ಸಿಆರ್‌ಎಂ/ಡಿಟಿಸಿಆರ್/429/99-2000 ದಿನಾಂಕ: 31.7.1999 ರಲ್ಲಿ ಮಾಡಿದ ಆದೇಶದಂತೆ ಮಾರಾಟ ಮಾಡಿ ಅದರ ಮೌಲ್ಯ ರೂ. 11243/- ಗಳನ್ನು ಸರಕಾರಕ್ಕೆ ದಿನಾಂಕ: 19.8.99 ರಂದು ಚಲನ್ ನಂ. 6072 ರಲ್ಲಿ ಎಸ್.ಬಿ.ಐ. ಬೆಳಗಾಂವದಲ್ಲಿ ಜಮಾ ಮಾಡಿರುತ್ತಾರೆ. ಅಧಿಕೃತ ಅಧಿಕಾರಿಯವರ ಆದೇಶದ ದೃಢೀಕೃತ ಪ್ರತಿಯನ್ನು ನಿಪಿ-4 ಮತ್ತು ಅದರಲ್ಲಿಯ ಅವರ ಸಹಿಯನ್ನು ನಿಪಿ-4(ಎ) ಅಂತಾ ಗುರುತಿಸಲಾಯಿತು. ಈ ಕೇಸಿಗೆ ಸಂಬಂಧಿಸಿದ ಮೂಲ ದಾಖಲೆಗಳನ್ನು ಜೆ.ಎಂ.ಎಫ್.ಸಿ. 3ನೇ ನ್ಯಾಯಾಲಯ, ಬೆಳಗಾಂವದಲ್ಲಿ ಸಲ್ಲಿಸಲಾಗಿದ್ದು, ದೃಢೀಕೃತ ಪ್ರತಿಗಳನ್ನು ಪ್ರಾಧಿಕಾರದ ಮುಂದೆ ಹಾಜರುಪಡಿಸಿದ್ದಾರೆ. ಪ್ರಥಮ ವರ್ತಮಾನದ ದೃಢೀಕೃತ ಪ್ರತಿ ನಿಪಿ-5 ಮತ್ತು ಅದರಲ್ಲಿಯ ಅವರ ಸಹಿಯನ್ನು ನಿಪಿ-5(ಎ) ಅಂತಾ ಗುರುತಿಸಲಾಗಿದೆ. ಅಧಿಕೃತ ಅಧಿಕಾರಿಯವರಿಗೆ ಜಪ್ತಾದ ಮುದ್ದೆ ಮಾಲುಗಳ ಬಗ್ಗೆ ಪಿ.ಎಸ್.ಐ. ಕಾಕತಿ ಇವರು ಸಲ್ಲಿಸಿದ ವರದಿಯ ದೃಢೀಕೃತ ಪ್ರತಿ ನಿಪಿ-6 ಮತ್ತು ಅದರಲ್ಲಿಯ ಅವರ ಸಹಿಯನ್ನು ನಿಪಿ-6(ಎ) ಅಂತಾ

ಗುರುತಿಸಲಾಗಿದೆ. ಜಪ್ತಾದ ವಾಹನವನ್ನು ಅಧಿಕೃತ ಅಧಿಕಾರಿಯವರ ಆದೇಶ ದಿನಾಂಕ: 13.5.1999ರ ಪ್ರಕಾರ 15.5.1999 ರಂದು ಅದರ ಮಾಲೀಕರಿಗೆ ಬಿಟ್ಟು ಕೊಡಲಾಗಿದೆ. ವಾಹನವನ್ನು ನೋಡಿದರೆ ಗುರುತಿಸುತ್ತೇನೆ (ಗುರುತಿನ ಬಗ್ಗೆ ತಕರಾರು ಇರುವುದಿಲ್ಲ).

ನಂತರ ಪಾಟೀ ಸವಾಲು ವಾಹನ ಮಾಲೀಕರ ವಕೀಲರಿಂದ ಮಾಡಿದ್ದು ಅದಕ್ಕೆ, ಗುನ್ನೆ ಜಾಗೆಗೆ ಭೇಟಿ ಕೊಟ್ಟಿಲ್ಲ ಅಂದರೆ ನಿಜ, ಅವರು ಸಾಕ್ಷಿದಾರರ ಹೇಳಿಕೆಗಳನ್ನು ಪಡೆದುಕೊಂಡಿಲ್ಲ ಅಂದರೆ ನಿಜ, ಫಿರ್ಯಾದು ಬರೆದವರು ಅಂದರೆ ಬೆರಳಚ್ಚು ಮಾಡಿದವರ ಹೇಳಿಕೆ ಪಡೆದಿಲ್ಲ ಅಂದರೆ ನಿಜ. ಅವರು ಈ ಕೇಸಿಗೆ ಸಂಬಂಧಿಸಿದ ಮಾದರಿ ಮದ್ಯದ ಬಾಟ್ಲಿಗಳನ್ನು ಪರೀಕ್ಷೆಗೆ ಬೇರೆ ಮದ್ಯದ ಬಾಟ್ಲಿಗಳನ್ನು ಕಳಿಸಿಕೊಟ್ಟಿದ್ದೇನೆ ಎಂದರೆ ಸರಿಯಲ್ಲ. ಫಿರ್ಯಾದಿನಲ್ಲಿ ವಾಹನ ಮಾಲೀಕರ ಹೆಸರು ಇರುವುದಿಲ್ಲ ಅನ್ನುವುದು ನಿಜ, ವಾಹನದ ಮಾಲೀಕರ ವಿರುದ್ಧ ದೋಷಾರೋಪಣ ಪತ್ರ ಸಲ್ಲಿಸಿಲ್ಲ ಅಂದರೆ ಸರಿಯಲ್ಲ. ಜಪ್ತಾದ ವಾಹನದಲ್ಲಿ ಯಾವುದೇ ಮದ್ಯವು ಸಾಗಾಟವಾಗುತ್ತಿರಲಿಲ್ಲ ಅಂದರೆ ಸರಿಯಲ್ಲ ಮತ್ತು ಜಪ್ತಾದ ಮುದ್ದೆ ಮಾಲು ಈ ಪ್ರಕರಣಕ್ಕೆ ಸಂಬಂಧಿಸಿಲ್ಲ ಅಂದರೆ ಸರಿಯಲ್ಲ. ವಾರಸುದಾರರಿಲ್ಲದ ಮದ್ಯವನ್ನು ಉಪಯೋಗಿಸಿ ಆರೋಪಿತರ ವಿರುದ್ಧ ಸುಳ್ಳು ದೋಷಾರೋಪಣ ಪತ್ರವನ್ನು ಸಲ್ಲಿಸಿದ್ದೇನೆ ಎಂದರೆ ಸರಿಯಲ್ಲ. ಈ ಪ್ರಕರಣದಲ್ಲಿ ಅವರು ಯಾವುದೇ ಪಂಚನಾಮೆ ಮಾಡಿರುವುದಿಲ್ಲ ಎಂದರೆ ನಿಜ. ಈ ರೀತಿ ಪಾಟೀ ಸವಾಲಿಗೆ ಉತ್ತರ ನೀಡಿದ್ದು ಇದರಿಂದ ವಾಹನ ಮಾಲೀಕರಿಗೆ ಯಾವುದೇ ಪ್ರಯೋಜನವಾಗಿರುವುದಿಲ್ಲ.

ನಂತರ ಬಸೀರ ಅಬ್ದುಲ್ ಖಾದರ ಶೇಖ, ಸಾ: ಕಾಕತಿ, ಬೆಳಗಾಂವ ಇವರ ಹೇಳಿಕೆಯನ್ನು ಪ್ರಾ.ಸಾ-3 ರಾಗಿ ತೆಗೆದುಕೊಳ್ಳಲಾಯಿತು. ಅವರನ್ನು ಈ ಕೇಸಿನಲ್ಲಿ ಸಿ.ಪಿ.ಐ. ನಾಗರಾಜ ಪಂಚನೆಂದು ಎಲ್ಲಿಗೂ ಕರೆದುಕೊಂಡು ಹೋಗಿರುವುದಿಲ್ಲ ಮತ್ತು ಅವರ ಸಮಕ್ಷಮ ಯಾವುದೇ ವಾಹನವನ್ನು ಆಗಲಿ, ಮದ್ಯವನ್ನಾಗಲಿ ಜಪ್ತಿ ಮಾಡಿರುವುದಿಲ್ಲ. ಈಗ ಅವರಿಗೆ ತೋರಿಸಿದ ದಾಖಲೆ ನಿಪಿ-1 ರಲ್ಲಿ ಅವರ ಸಹಿಗಳನ್ನು ನೋಡಿದ್ದಾರೆ. ಅವರು ಕಾಕತಿ ಪೊಲೀಸ್ ಠಾಣೆಯಲ್ಲಿ ಸುಮಾರು ಒಂದುವರಿ ವರ್ಷದ ಹಿಂದೆ ಹೋಗಿದ್ದಾಗ ಅವರ ಸಹಿಗಳನ್ನು ಪಡೆದುಕೊಂಡಿರುತ್ತಾರೆ. ನಿಪಿ-1 ರಲ್ಲಿ ಏನು ಬರೆದಿರುತ್ತಾರೆ ಅವರಿಗೆ ಗೊತ್ತಿರುವುದಿಲ್ಲ.

ಸಾಕ್ಷಿಯನ್ನು ಪ್ರತಿಕೂಲ ಸಾಕ್ಷಿ ಎಂದು ಪರಿಗಣಿಸಿ ಪಾಟೀ ಸವಾಲು ಮಾಡಲು ಎ.ಡಿ.ಪಿ. ಯವರಿಗೆ ಅನುಮತಿ ನೀಡಿದೆ. ಪಾಟೀ ಸವಾಲು ಎ.ಡಿ.ಪಿ. ಯವರಿಂದ : ಅವರನ್ನು ಫಿರ್ಯಾದಿಯವರು 1.5.1999 ರಂದು ತಮ್ಮ ಜೊತೆಯಲ್ಲಿ ಪಂಚನೆಂದು ಹೊನಗಾ ಮಾರ್ಕಾಂಡೆ ನದಿಯ ಬ್ರಿಜ್ ಹತ್ತಿರ ಅಬಕಾರಿ ಗುನ್ನೆ ಪತ್ತೆ ಮಾಡಲು ಕರೆದುಕೊಂಡು ಹೋಗಿದ್ದರು ಎಂದರೆ ಸರಿಯಲ್ಲ. ಮಧ್ಯಾಹ್ನ 1.30 ರ ಸುಮಾರಿಗೆ ವಾಹನ ಕೆಎ-23-ಎಂ-2409 ನೇದ್ದನ್ನು ನಿಲ್ಲಿಸಿ ನಮ್ಮ ಸಮಕ್ಷಮ ಪರೀಕ್ಷೆ ಮಾಡಿದಾಗ ಅದರಲ್ಲಿಯ ಚಾಲಕನು ಓಡಿ ಹೋಗಿದ್ದು ಉಳಿದ ಇಬ್ಬರ ಹೆಸರು ಕೇಳಿ ವಾಹನದಲ್ಲಿ ಸರಕಾರಕ್ಕೆ ಕರಕೊಡದ ಮದ್ಯದ ಬಾಟ್ಲಿಗಳು ಇದ್ದು 11 ರಟ್ಟಿನ ಪೆಟ್ಟಿಗೆಗಳನ್ನು ಜಪ್ತಿ ಮಾಡಿ ಅವುಗಳಿಂದ (7) ಮದ್ಯದ ಬಾಟ್ಲಿಗಳನ್ನು ಮಾದರಿ ತೆಗೆದಿರುತ್ತಾರೆ ಎಂದರೆ ಸರಿಯಲ್ಲ. ಸದರಿ ವಾಹನ ಮತ್ತು ಮದ್ಯವನ್ನು ನಿಪಿ-1 ರಡಿಯಲ್ಲಿ ಜಪ್ತಿ ಮಾಡಿ ಆರೋಪಿತರನ್ನು ದಸ್ತಗಿರಿ ಮಾಡಿರುತ್ತಾರೆ ಎಂದರೆ ಸರಿಯಲ್ಲ. ವಾಹನ ಮಾಲೀಕರಿಗೆ ಸಹಾಯ ಮಾಡಲು ಈಗ ಅವರು ಸುಳ್ಳು ಹೇಳುತ್ತಿದ್ದಾರೆ ಎಂದರೆ ಸರಿಯಲ್ಲ. ಇವರನ್ನು ವಾಹನ ಮಾಲೀಕರ ವಕೀಲರು ಪಾಟೀ ಸವಾಲು ಮಾಡಿರುವುದಿಲ್ಲ.

ನಂತರ ಪ್ರಾ.ಸಾ-4 ಪ್ರಭಾಕರ ಭೀಮರಾವ ಬಾರ್ಕಿ, ಈಗ ಸಿ.ಪಿ.ಐ. ರೈಲ್ವೆ ವಿಭಾಗ, ಹುಬ್ಬಳ್ಳಿ ಇವರ ಹೇಳಿಕೆಯನ್ನು ದಿನಾಂಕ: 26.6.2003 ರಂದು ಪಡೆಯಲಾಯಿತು. ಅವರು ಕಾಕತಿ ಪೊಲೀಸ್ ಠಾಣೆಯಲ್ಲಿ 1998 ರಿಂದ 2001 ರವರೆಗೆ ಪಿ.ಎಸ್.ಐ. ಆಗಿ ಕಾರ್ಯ ನಿರ್ವಹಿಸುತ್ತಿದ್ದರು. ದಿನಾಂಕ: 1.5.1999 ರಂದು ಠಾಣೆಯಲ್ಲಿದ್ದಾಗ ಸಿ.ಪಿ.ಐ. ಕೆ. ನಾಗರಾಜು, ಬೆಳಗಾಂವ ಗ್ರಾಮೀಣ ಇವರು ಬೆರಳಚ್ಚು ಮಾಡಿಸಿದ ಫಿರ್ಯಾದು ಹಾಗೂ ಇಬ್ಬರು ಆರೋಪಿತರೊಂದಿಗೆ ಹಾಗೂ ಜಪ್ತಿ ಮಾಡಿದ ಮುದ್ದೆ ಮಾಲಿನೊಂದಿಗೆ ಹಾಗೂ ರಸಾಯನಿಕ ಪರೀಕ್ಷೆಗೆ ತೆಗೆದ 7 X 180 ಎಂ.ಎಲ್. ದ ಬಾಟ್ಲಿಗಳೊಂದಿಗೆ ಜಪ್ತಾದ ವಾಹನ ನಂ. ಕೆಎ-23-ಎಂ-2409 ಟೆಂಪೋ ಟ್ರ್ಯಾಕ್ಸ್ ನೇದ್ದನ್ನು ಠಾಣೆಗೆ ತೆಗೆದುಕೊಂಡು ಬಂದು ಫಿರ್ಯಾದನ್ನು ಕೊಟ್ಟರು. ಅದನ್ನು ಕಾಕತಿ ಪಿ.ಎಸ್. ಗುನ್ನೆ ನಂ. 78/99 ಕರ್ನಾಟಕ ಅಬಕಾರಿ ಕಾಯ್ದೆ ಕಲಂ 34ರ ಅಡಿಯಲ್ಲಿ ದಾಖಲು ಮಾಡಿದ್ದೇನೆ. ಮತ್ತು ಪ್ರಥಮ ವರ್ತಮಾನ ವರದಿಯೊಂದಿಗೆ ಫಿರ್ಯಾದನ್ನು ನ್ಯಾಯಾಲಯಕ್ಕೆ ಕಳಿಸಿಕೊಟ್ಟೆನು. ಜಪ್ತಾದ ಮುದ್ದೆ ಮಾಲಿನ ಬಗ್ಗೆ ಪಿ.ಎಫ್. ಬರೆದು ಅಬಕಾರಿ ಉಪ ಆಯುಕ್ತರು ಇವರಿಗೆ ಸಲ್ಲಿಸಿದೆನು. ದಸ್ತಗಿರಿ ಮಾಡಿದ ಆರೋಪಿತನನ್ನು ಜಾಮೀನಿನ ಮೇಲೆ ಬಿಡುಗಡೆ ಮಾಡಿದೆನು. ಸಾಕ್ಷಿದಾರರಿಂದ ಸಿಪಿಸಿ 2094 ಹಾಗೂ 2101 ಇವರ ಸವಿಸ್ತಾರ ಹೇಳಿಕೆಯನ್ನು ಪಡೆದುಕೊಂಡೆನು. ದಿನಾಂಕ: 15.5.1999 ರಂದು ಜೆ.ಎಂ.ಎಫ್.ಸಿ. 2ನೇ ನ್ಯಾಯಾಲಯದಿಂದ ಆರೋಪಿ ಇಮ್ರಾನ್ ಕಾಶೀಮಸಾಬ ಮುಜಾವರ, ಸಾ: ಹುಕ್ಕೇರಿ ಈತನು ಜಾಮೀನು ಪಡೆದ ಬಗ್ಗೆ ಮಾಹಿತಿ ಸ್ವೀಕರಿಸಿದೆನು. ಹಾಗೂ ಟೆಂಪೋ ಮಧ್ಯಂತರ ಬಿಡುಗಡೆಗಾಗಿ ಅಧಿಕೃತ ಅಧಿಕಾರಿಯವರ ಆದೇಶ ಬಂದಿದ್ದರಿಂದ ಅದನ್ನು ಅವರ ಮಾಲೀಕರಾದ ಶ್ರೀ ಬಸವರಾಜ ಅರ್ಜುನ ಮುಕ್ಕಣ್ಣವರ, ಸಾ: ಹುಕ್ಕೇರಿ (ಆರೋಪಿ ನಂ-1) ಇವರಿಗೆ ಬಿಡುಗಡೆ ಮಾಡಿ ಅವರಿಂದ ಆ ಬಗ್ಗೆ ಪಾವತಿ ಪಡೆದುಕೊಂಡೆನು. ಜಪ್ತಾದ ಉಳಿದ ಮುದ್ದೆ ಮಾಲನ್ನು ಹಾಗೂ ತನಿಖಾ ಕಾಗದ ಪತ್ರಗಳನ್ನು ಅಬಕಾರಿ ಇಲಾಖೆಯವರಿಗೆ ವರ್ಗಾಯಿಸಿದೆನು. ವಾಹನ ನೋಡಿದರೆ ಗುರುತಿಸುತ್ತೇನೆ (ವಾಹನ ಹಾಜರುಪಡಿಸಿರುವುದಿಲ್ಲ. ಆದರೆ ಗುರುತಿನ ಬಗ್ಗೆ ತಕರಾರು ಇರುವುದಿಲ್ಲ). ನಿಪಿ-5 ಪ್ರಥಮ ವರ್ತಮಾನ ವರದಿಯ ದೃಢೀಕೃತ ಪ್ರತಿ ಇರುತ್ತದೆ. ಮುದ್ದೆ ಮಾಲನ್ನು ತನಿಖಾ ಕಾಗದ ಪತ್ರಗಳೊಂದಿಗೆ ಅಬಕಾರಿ ಇಲಾಖೆಯವರಿಗೆ ವರ್ಗಾವಣೆ ಮಾಡುವ ಬಗ್ಗೆ ನಾನು ಅಧಿಕೃತ ಅಧಿಕಾರಿಯವರಿಗೆ ಬರೆದ ಪತ್ರವನ್ನು ನಿಪಿ-6 ಅದರಲ್ಲಿರುವ ಅವರ ಸಹಿಯನ್ನು ನಿಪಿ-6ಅ ಅಂತಾ ಗುರುತಿಸಲಾಗಿದೆ. ವಾಹನ ಮಾಲೀಕರ ಪರ ವಕೀಲರು ತನಿಖಾಧಿಕಾರಿಗಳನ್ನು ಪಾಟೀ ಸವಾಲು ಮಾಡಿದ್ದು ಇದರಿಂದ ವಾಹನ ಮಾಲೀಕರಿಗೆ ಯಾವುದೇ ಪ್ರಯೋಜನಕಾರಿಯಾದ ಅಂಶಗಳು ಕಂಡು ಬಂದಿರುವುದಿಲ್ಲ.

ನಂತರ ಪ್ರಾ.ಸಾ-5 ಶ್ರೀ ಯಲ್ಲಪ್ಪಾ ನಾಗಪ್ಪಾ ತಳವಾರ, ಸಾ: ಕಾಕತಿ ಪಂಚ ಸಾಕ್ಷಿ ಇವರ ಹೇಳಿಕೆಯನ್ನು ಪಡೆಯಲಾಯಿತು. ಅವರನ್ನು ಈ ಪ್ರಕರಣದಲ್ಲಿ ಪೊಲೀಸರು ಕಾಕತಿ ಪಿ.ಎಸ್. ಗೆ 1999 ರಲ್ಲಿ ಕರಿಸಿ ಒಂದು ಪಂಚನಾಮೆಯ ಮೇಲೆ ಸಹಿಗಳನ್ನು ಪಡೆದುಕೊಂಡಿರುತ್ತಾರೆ. ಆದರೆ ಬೇರೆ ಯಾವುದೇ ಸ್ಥಳಕ್ಕೆ ಕರೆದುಕೊಂಡು ಹೋಗಿಲ್ಲ ಮತ್ತು ನನ್ನ ಸಮಕ್ಷಮ ಯಾವುದೇ ಮದ್ಯ ಸಾಗಾಟ ಮಾಡುತ್ತಿದ್ದ ವಾಹನವನ್ನು ಜಪ್ತಿ ಮಾಡಿರುವುದಿಲ್ಲ. ಪಂಚನಾಮೆಯಲ್ಲಿ ಏನು ಬರೆದಿರುತ್ತಾರೆ ಎನ್ನುವುದು ನನಗೆ ಹೇಳಲು ಬರುವುದಿಲ್ಲ.

ಈಗ ನನಗೆ, ತೋರಿಸಿದ ದಾಖಲೆ ನಿಪಿ-1 ಸದರಿ ಪಂಚನಾಮೆಯ ದೃಢೀಕೃತ ಫೋಟೋ ಪ್ರತಿ ಇದ್ದು ಅದರಲ್ಲಿ ನನ್ನ ಸಹಿಗಳು ಇರುತ್ತವೆ. ಆದರೆ ನನಗೆ ಗುನ್ಹೆಯ ಬಗ್ಗೆ ಮಾಹಿತಿ ಇಲ್ಲ. ಸಾಕ್ಷಿಯನ್ನು ಪ್ರತಿಕೂಲ ಸಾಕ್ಷಿ ಎಂದು ಪರಿಗಣಿಸಿ ಪಾಟೀ ಸವಾಲು ಮಾಡಲು ಎ.ಡಿ.ಪಿ. ಯವರು ಅನುಮತಿ ಕೇಳಿದರು ಅನುಮತಿ ನೀಡಲಾಗಿದೆ.

ಪಾಟೀ ಸವಾಲು ಎ.ಡಿ.ಪಿ. ಯವರಿಂದ ದಿನಾಂಕ: 1.5.1999 ರಂದು ಸಿ.ಪಿ.ಐ. ನಾಗರಾಜ ಇವರು ನನ್ನನ್ನು ಮತ್ತು ಇನ್ನೊಬ್ಬ ಪಂಚನನ್ನು ತಮ್ಮ ಜೊತೆಯಲ್ಲಿ ಮಾರ್ಕಾಂಡೆಯ ನದಿಯ ಹತ್ತಿರ ಬ್ರಿಜ್ ಹತ್ತಿರ ಹೊನಗಾ ಸಮೀಪದಲ್ಲಿ ಕರೆದುಕೊಂಡು ಹೋಗಿದ್ದರು ಅಂದರೆ ಸರಿಯಲ್ಲ. ನಮ್ಮ ಸಮಕ್ಷಮ ಟೆಂಪೋ ಟ್ರ್ಯಾಕ್ಸ್ ವಾಹನ ನಂ. ಕೆಎ-23-ಎಂ-2409 ನೇದ್ದನ್ನು ತಪಾಸಣೆ ಮಾಡಿದಾಗ ಅದರಲ್ಲಿ ಸರ್ಕಾರಕ್ಕೆ ಕರಕೊಡದ ಮದ್ಯದ ಬಾಟ್ಲಿಗಳು ಇದ್ದ ರಟ್ಟಿನ ಪೆಟ್ಟಿಗೆಗಳು ಕಂಡು ಬಂದವು ಎಂದರೆ ಸರಿಯಲ್ಲ. ನಮ್ಮ ಸಮಕ್ಷಮ ಅವುಗಳಿಂದ ರಸಾಯನಿಕ ಪರೀಕ್ಷೆಗಾಗಿ ಮದ್ಯದ ಬಾಟ್ಲಿಗಳನ್ನು ಮಾದರಿ ತೆಗೆದು ವಾಹನ ಹಾಗೂ ಮದ್ಯವನ್ನು ನಿಪಿ-1 ರಲ್ಲಿ ಬರೆದ ಪ್ರಕಾರ ಜಪ್ತಿ ಮಾಡಿದರು ಹಾಗೂ ವಾಹನದಲ್ಲಿದ್ದ ಇಬ್ಬರನ್ನು ದಸ್ತಗಿರಿ ಮಾಡಿದರು ಎಂದರೆ ಸರಿಯಲ್ಲ. ವಾಹನದಲ್ಲಿದ್ದ ಇನ್ನೊಬ್ಬನು ಓಡಿಹೋದನು ಎಂದರೆ ಸರಿಯಲ್ಲ. ವಾಹನ ಮಾಲೀಕರಿಗೆ ಸಹಾಯ ಮಾಡಲು ನಾನು ಸುಳ್ಳು ಹೇಳುತ್ತಿದ್ದೇನೆ ಎಂದರೆ ಸರಿಯಲ್ಲ.

ಈ ಪ್ರಕರಣದಲ್ಲಿ ಪಂಚ ಸಾಕ್ಷಿದಾರರಾದ ಪ್ರಾ.ಸಾ-3 ಹಾಗೂ ಪ್ರಾ.ಸಾ-5 ಪ್ರತಿಕೂಲ ಸಾಕ್ಷ್ಯ ನೀಡಿದ್ದರೂ ಸಹ ತನಿಖಾಧಿಕಾರಿ ತೃಪ್ತಿಕರ ಸಾಕ್ಷ್ಯ ನೀಡಿದರೆ ಅವರ ಸಾಕ್ಷ್ಯವನ್ನು ನಂಬಬಹುದಾಗಿದೆ. ಇಂತಹ ಪ್ರಕರಣದಲ್ಲಿ ಪ್ರಾಧಿಕಾರಕ್ಕೆ ಅಬಕಾರಿ ಅಪರಾಧದಲ್ಲಿ ವಾಹನವನ್ನು ಜಪ್ತಿ ಮಾಡಿಕೊಳ್ಳಲಾಗಿದೆಯೆಂದು ತೃಪ್ತಿಕರವಾಗಿ ಮನವರಿಕೆಯಾದರೆ ಕಾನೂನು ಪ್ರಕಾರ ಸಾಕಾಗಬಹುದೇ ಹೊರತು ಸಂಗತಿಯನ್ನು ಸೌಂಶಯಾತೀತವಾಗಿ ರುಜುವಾತು ಪಡೆಸುವ ಅಗತ್ಯ ಇರುವುದಿಲ್ಲ. ಅಲ್ಲದೇ ಐ.ಎಲ್.ಆರ್. 1978 ಸುಪ್ರೀಮ್ ಕೋರ್ಟ್ ಪುಟ ಸಂ. 151 ರಲ್ಲಿ ನಮೂದಿಸಿದಂತೆ.

> "If the evidence of the investigating officer who recovered the materials object is concerning the evidence as to recovery need not be rejected on the ground that the seizure witness do not support the prosecution version."

ಆದ್ದರಿಂದ ಪ್ರಾ.ಸಾ-1, ಪ್ರಾ.ಸಾ-2 ಹಾಗೂ ಪ್ರಾ.ಸಾ-4 ಇವರ ಹೇಳಿಕೆಯ ಮೇಲೆ ದಿನಾಂಕ: 1.5.1999 ರಂದು ವಾಹನ ಟ್ರ್ಯಾಕ್ಸ್ ಜೀಪ್ ನಂ. ಕೆಎ-23-ಎಂ-2409 ರಲ್ಲಿ ಅಕ್ರಮ ಮದ್ಯ ಸಾಗಾಣಿಕೆಯಾಗಿರುವುದು ನಿಜವೆಂದು ಕಂಡು ಬರುತ್ತದೆ. ಆದ್ದರಿಂದ ಒಂದನೆಯ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ.

ನಂತರ ಶ್ರೀ ಸದಾಶಿವ ಅರ್ಜುನ ಮುಕ್ಕನ್ನವರ, ವಾಹನ ಮಾಲೀಕರು ವಾಹನ ಸಂ: ಕೆಎ-23-ಎಂ-2409 ಟೆಂಪೋ ಟ್ರ್ಯಾಕ್ಸ್ ಇವರ ಹೇಳಿಕೆಯನ್ನು ಪಡೆಯಲಾಯಿತು. ಈ ಕೇಸಿನಲ್ಲಿ ಅವರು ಟೆಂಪೋ ಟ್ರ್ಯಾಕ್ಸ್‌ದ ನಂ. ಕೆಎ-23-ಎಂ-2409 ವಾಹನದ ಮಾಲೀಕರಿದ್ದಾರೆ. ಸದರಿ ವಾಹನದ ಮಾಲೀಕತ್ವದ ಬಗ್ಗೆ ಮೂಲ ಆರ್.ಸಿ. ಬುಕ್ಕನ್ನು ಈ ಪ್ರಾಧಿಕಾರದ ಮುಂದೆ ಅದರ ಫೋಟೋ ಪ್ರತಿಯನ್ನು ಹಾಜರುಪಡಿಸಿದ್ದಾರೆ. ವಾಹನವನ್ನು ಹುಕ್ಕೇರಿ ಸಂಕೇಶ್ವರ ಭಾಗದಲ್ಲಿ ಪ್ರಯಾಣಿಕರ ಸಾಗಾಟಕ್ಕೆ ಉಪಯೋಗ ಮಾಡುತ್ತಾರೆ ಮತ್ತು ಅವರು ಸ್ವಂತ ಕೆಲಸಕ್ಕೆ ಉಪಯೋಗಿಸುತ್ತಾರೆ. ಅದನ್ನು ನಡೆಸಲು ಇಮ್ರಾನ್ ಕರೀಮಸಾಬ ಮುಜಾವರ (3ನೇ ಆರೋಪಿ) ಇವರನ್ನು ನೇಮಿಸಿಕೊಂಡಿದ್ದೇನೆ. ವಾಹನ ಖರೀದಿ ಮಾಡಿದಾಗಿನಿಂದ ವಾಹನದ ದೇಖರಕಿಯನ್ನು ವಾಹನ ಮಾಲೀಕರು ಮತ್ತು ಅವರ ತಮ್ಮ ಬಸವರಾಜ ಅರ್ಜುನ ಮುಕ್ಕನ್ನವರ ಕೂಡಿ ಮಾಡುತ್ತಿದ್ದರು. ವಾಹನವನ್ನು ದಿನಾಲು ಚಾಲಕನು ಮುಂಜಾನೆ ತೆಗೆದುಕೊಂಡು ಹೋಗಿ ಸಾಯಂಕಾಲ ಅವರ ಮನೆಯ ಮುಂದೆ ನಿಲ್ಲಿಸುತ್ತಿದ್ದನು. ಘಟನೆ ನಡೆದ ದಿನಾಂಕ: 1.5.1999 ರಂದು ವಾಹನ ಚಾಲಕನನ್ನು ಹಿಡಿದುಕೊಂಡು ಹೋಗಿದ್ದರಿಂದ ವಾಹನ ತಂದು ಕೊಟ್ಟಿರಲಿಲ್ಲ. ಅವರು ಶಾಲೆಯಲ್ಲಿ ಕೆಲಸ ಮಾಡುತ್ತಿದ್ದಾಗ ಈ ವಿಷಯ ಅವರಿಗೆ ಗೊತ್ತಾಗಿ ಅಧಿಕೃತ ಅಧಿಕಾರಿಯವರಿಗೆ ವಾಹನ ಬಿಡುಗಡೆ ಸಲುವಾಗಿ ಅರ್ಜಿ ಸಲ್ಲಿಸಿ 65,000/- ಗಳ ಬ್ಯಾಂಕ್ ಗ್ಯಾರಂಟಿ ಮತ್ತು ನಷ್ಟ ಭರ್ತಿ ಪತ್ರ ಕೊಟ್ಟು ವಾಹನವನ್ನು ತಮ್ಮ ವಶಕ್ಕೆ ಪಡೆದುಕೊಂಡಿರುತ್ತಾರೆ. ಅದನ್ನು ಮುದ್ದೆ ಮಾಲು-1 ಅಂತಾ ಗುರುತಿಸಲಾಯಿತು. ಈ ಅಪರಾಧ ನಡೆದ ಬಗ್ಗೆ ಯಾವುದೇ ಮಾಹಿತಿ ಇರಲಿಲ್ಲ. ಮತ್ತು ತನ್ನನ್ನು ಈ ಪ್ರಕರಣದಲ್ಲಿ ಅಪರಾಧಿಯನ್ನಾಗಿ ಮಾಡಿರುವುದಿಲ್ಲ. ಉಳಿದ ಆರೋಪಿತರ ವಿರುದ್ಧ ಮಾತ್ರ ಫಿರ್ಯಾದನ್ನು ದಾಖಲು ಮಾಡಿಕೊಂಡಿರುತ್ತಾರೆ. ನಾನು ಸರಕಾರಿ ನೌಕರನಿದ್ದು, ಯಾವುದೇ ಅಪರಾಧ ಮಾಡಿಲ್ಲ ಮತ್ತು ನನ್ನ ವಾಹನವನ್ನು ಅಬಕಾರಿ ವಸ್ತುಗಳ ಅಕ್ರಮ ಸಾಗಾಟ ಮಾಡಲು ನಾನು ಯಾರಿಗೂ ಒಪ್ಪಿಗೆ ಕೊಟ್ಟಿರುವುದಿಲ್ಲ. ನಾನು ದಿನಾಂಕ: 1.5.1999 ರಂದು ಸರಕಾರಿ ಮಾದರಿ ಶಾಲೆ, ಹುಕ್ಕೇರಿಯಲ್ಲಿ ಸಹ ಶಿಕ್ಷಕನೆಂದು ಕೆಲಸ ಮಾಡುತ್ತಿದ್ದೆನು. ಆ ಬಗ್ಗೆ ದಾಖಲಾತಿಯನ್ನು ವಾದ ಸಮಯದಲ್ಲಿ ಹಾಜರುಪಡಿಸಿರುತ್ತೇನೆ. ನಾನು ಅಪರಾಧಿ ಇರದೇ ಇದ್ದುದರಿಂದ ಅವರ ವಾಹನವನ್ನು ಅವರಿಗೆ ಹಿಂತಿರುಗಿಸಬೇಕೆಂದು ವಿನಂತಿಸಿರುತ್ತಾರೆ. ಸದರಿ ವಾಹನವನ್ನು ಅವರು ಸಾಲ ತೆಗೆದು ಖರೀದಿ ಮಾಡಿದ್ದು ಅದನ್ನು ಮುಟ್ಟುಗೋಲು ಹಾಕಿಕೊಂಡಲ್ಲಿ ಅವರಿಗೆ ನಷ್ಟ ಉಂಟಾಗುತ್ತದೆ.

ಮಾನ್ಯ ಎ.ಡಿ.ಪಿ. ಇವರು ಪಾಟೀ ಸವಾಲು ಮಾಡಿರುತ್ತಾರೆ. ಪಾಟೀ ಸವಾಲಿನಲ್ಲಿ ಈ ಕೆಳಗಿನಂತೆ ಹೇಳಿರುತ್ತಾರೆ. ಈ ಪ್ರಕರಣದಲ್ಲಿಯ 1ನೇ ಆರೋಪಿ ಬಸವರಾಜ ಅರ್ಜುನ ಮುಕ್ಕನ್ನವರ ನನ್ನ ಸ್ವಂತ ತಮ್ಮನಿದ್ದಾನೆ ಎಂದರೆ ಸರಿ. ಆತನಿಗೆ ಮತ್ತು 3ನೇ ಆರೋಪಿ ವಾಹನ ಚಾಲಕನಿಗೆ ಅಕ್ರಮ ಮದ್ಯ ಸಾಗಾಟ ಮಾಡಲು ತಿಳಿಸಿ ನನ್ನ ವಾಹನವನ್ನು ಸ್ವಂತ ಫಾಯದೆಗಾಗಿ ಅಕ್ರಮ ಮದ್ಯ ಸಾಗಾಟ ಮಾಡಲು ಕೊಟ್ಟಿದ್ದೆನು ಅಂದರೆ ಸರಿಯಲ್ಲ. ನಾನು ನನ್ನ ವಾಹನದ ಮೇಲ್ವಿಚಾರಣೆಯನ್ನು ಕಟ್ಟು ನಿಟ್ಟಾಗಿ ಮಾಡಿದ್ದರೆ ಸದರಿ ಅಪರಾಧ ಆಗುತ್ತಿರಲಿಲ್ಲ ಎಂದರೆ ಸರಿ. ನನ್ನ ಒಪ್ಪಿಗೆಯಿಂದಲೇ ಅಪರಾಧ ನಡೆದಿದೆ ಮತ್ತು ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬೇಕಾಗುತ್ತದೆ ಎಂದರೆ ನಾನು ಒಪ್ಪಿಕೊಳ್ಳುವುದಿಲ್ಲ ಎಂದು ತಿಳಿಸಿದ್ದಾರೆ.

ಗುನ್ಹೆ ತಮಗೆ ತಿಳಿಯದಂತೆ ನಡೆದಿದೆ ಎಂದು ಸಾಧಿಸುವುದು ವಾಹನ ಮಾಲೀಕರ ಕರ್ತವ್ಯವಾಗಿದ್ದು ಅವರು ಪ್ರಾಧಿಕಾರದ ಮುಂದೆ ಯಾವುದೇ ಸಾಕ್ಷ್ಯಾಧಾರಗಳನ್ನು ಹಾಜರುಪಡಿಸಿ ಸಾಕ್ಷ್ಯ ನೀಡಿರುವುದಿಲ್ಲ. ಗುನ್ಹೆ ನಡೆದಾಗ ಮೂವರು ಆರೋಪಿತರು ಸಿಕ್ಕಿದ್ದು ಅದರಲ್ಲಿ ಬಸವರಾಜ ಅರ್ಜುನ ಮುಕ್ಕಣ್ಣವರ ಸಾ: ಹುಕ್ಕೇರಿ ಇವರು ವಾಹನ ಮಾಲೀಕರ ಸಹೋದರ ಇದ್ದು ವಾಹನ ಮಾಲೀಕರು ಅವರ

ಸಹೋದರನ ಸಹಾಯದಿಂದ ಈ ಅಕ್ರಮ ಕೃತ್ಯ ಮಾಡುತ್ತಿರಬಹುದೆಂದು ಪ್ರಾಧಿಕಾರಕ್ಕೆ ಮನವರಿಕೆಯಾಗಿದ್ದರಿಂದ ಎರಡನೆಯ ಪ್ರಶ್ನೆಗೆ ನಕಾರಾತ್ಮಕವಾಗಿ ಉತ್ತರಿಸಲಾಗಿದೆ.

ಮೇಲ್ಕಾಣಿಸಿದ ಕಾರಣಗಳಿಂದ ಈ ಪ್ರಕರಣದಲ್ಲಿ ಜಪ್ತಾದ ಟ್ರ್ಯಾಕ್ಸ್ ವಾಹನ ಸಂ. ಕೆಎ-23-ಎಂ-2409 ಇದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಉಚಿತವೆಂದು ಪ್ರಾಧಿಕಾರಕ್ಕೆ ಮನವರಿಕೆಯಾಗಿದ್ದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ಶ್ರೀ ಪಿ.ಎನ್. ಮುರಗೋಡ, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಬೆಳಗಾಂವ ಜಿಲ್ಲೆ ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43(ಎ) ರ ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಪಿ.ಎಸ್.ಐ., ಕಾಕತಿ ಪಿ.ಎಸ್., ಬೆಳಗಾಂವ ಇವರು ದಾಖಲು ಮಾಡಿದ ಗುನ್ಹೆ ನಂ. 78/98 ದಿನಾಂಕ: 1.5.1999 ರಲ್ಲಿ ಜಪ್ತಾದ ವಾಹನ ಸಂ. ಕೆಎ-23-ಎಂ-2409 ಟೆಂಪೋ ಟ್ರ್ಯಾಕ್ಸ್ ಇದನ್ನು ಕರ್ನಾಟಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ವಶಪಡಿಸಿಕೊಂಡ ಮದ್ಯವನ್ನು ಈಗಾಗಲೇ ಈ ಪ್ರಾಧಿಕಾರದ ಆದೇಶ ದಿನಾಂಕ: 31.7.1999 ರಂದು ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡಲಾಗಿದೆ.

ಈ ಆದೇಶವನ್ನು ಇಂದು ದಿನಾಂಕ: 26.2.2004 ರಂದು ಉಕ್ತಲೇಖನ ಕೊಟ್ಟು ಗಣಕಯಂತ್ರದಲ್ಲಿ ಮುದ್ರಣ ಮಾಡಿಸಿ ಪ್ರತಿಯನ್ನು ತಿದ್ದಿ ತೆರೆದ ನ್ಯಾಯಾಲಯದಲ್ಲಿ ಘೋಷಿಸಲಾಗಿದೆ.

**ಪಿ.ಎನ್. ಮುರಗೋಡ**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ಬೆಳಗಾಂವ ಜಿಲ್ಲೆ, ಬೆಳಗಾಂವ.

**ಅನುಬಂಧ - 1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:**

| | | | |
|---|---|---|---|
| ಪ್ರಾ.ಸಾ.: 1 | - | ಶ್ರೀ ಕೆ. ನಾಗರಾಜ, ಸಿ.ಪಿ.ಐ., ಬೆಳಗಾಂವ ರೂರಲ್ | - ಫಿರ್ಯಾದಿ |
| ಪ್ರಾ.ಸಾ.: 2 | - | ಶ್ರೀ ಜಿ.ಎಂ. ಕೊಟಗಾರ, ಅಬಕಾರಿ ಸಬ್ ಇನ್‌ಸ್ಪೆಕ್ಟರ್ ಉತ್ತರ ಉಪವಲಯ ನಂ-2, ಬೆಳಗಾಂವ | - ತನಿಖಾಧಿಕಾರಿ |
| ಪ್ರಾ.ಸಾ.: 3 | - | ಶ್ರೀ ಬಶೀರ ಅಹಮ್ಮದ್ ಅಬ್ದುಲ್ ಖಾದರ ಶೇಖ, ಸಾ: ಕಾಕತಿ | - ಪಂಚ |
| ಪ್ರಾ.ಸಾ.: 4 | - | ಶ್ರೀ ಪಿ.ಬಿ. ಬಾರ್ಕಿ, ಪಿ.ಎಸ್.ಐ. | - ಫಿರ್ಯಾದಿ |
| ಪ್ರಾ.ಸಾ.: 5 | - | ಶ್ರೀ ಯಲ್ಲಪ್ಪಾ ನಾಗಪ್ಪಾ ತಳವಾರ | - ಪಂಚ |

**ಅನುಬಂಧ - 2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:**

| | | |
|---|---|---|
| ನಿಶಾನೆ ಪಿ-1 | - | ಪಂಚನಾಮೆಯ ದೃಢೀಕೃತ ಫೋಟೋ ಪ್ರತಿ |
| ನಿಶಾನೆ ಪಿ-1ಎ | - | ಅದರ ಮೇಲಿನ ಸಹಿ |
| ನಿಶಾನೆ ಪಿ-2 | - | ಫಿರ್ಯಾದಿನ ದೃಢೀಕೃತ ಫೋಟೋ ಪ್ರತಿ |
| ನಿಶಾನೆ ಪಿ-2ಎ | - | ಅದರ ಮೇಲಿನ ಸಹಿ |
| ನಿಶಾನೆ ಪಿ-3 | - | ರಾಸಾಯನಿಕ ವಿಶ್ಲೇಷಣೆ ಪ್ರಮಾಣ ಪತ್ರದ ದೃಢೀಕೃತ ಪ್ರತಿ |
| ನಿಶಾನೆ ಪಿ-3ಎ | - | ಅದರ ಮೇಲಿನ ಸಹಿ |
| ನಿಶಾನೆ ಪಿ-4 | - | ಜಪ್ತಾದ ಮುದ್ದೆ ಮಾಲನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡ ಆದೇಶ. |
| ನಿಶಾನೆ ಪಿ-4ಎ | - | ಅದರ ಮೇಲಿನ ಸಹಿ |
| ನಿಶಾನೆ ಪಿ-5 | - | ಪ್ರಥಮ ವರ್ತಮಾನದ ದೃಢೀಕೃತ ವರದಿ |
| ನಿಶಾನೆ ಪಿ-5ಎ | - | ಅದರ ಮೇಲಿನ ಪ್ರಾ.ಸಾ-2 ನೇಯದರ ಸಹಿ |
| ನಿಶಾನೆ ಪಿ-6 | - | ಜಪ್ತಾದ ಮುದ್ದೆ ಮಾಲನ್ನು ವರ್ಗಾಯಿಸಲು ಅಧಿಕಾರಿಯವರಿಗೆ ಬರೆದ ಪತ್ರದ ದೃಢೀಕೃತ ಪ್ರತಿ |
| ನಿಶಾನೆ ಪಿ-6ಎ | - | ಅದರ ಮೇಲಿನ ಸಹಿ |

**ಅನುಬಂಧ - 3**

ಫಿರ್ಯಾದುದಾರರ ಪರ ಗುರುತಿಸಲಾದ ವಸ್ತುಗಳು - ಇಲ್ಲಾ

**ಅನುಬಂಧ - 4**

**ವಾಹನ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು:**

ಸದಾಶಿವ ಅರ್ಜುನ ಮುಕ್ಕನ್ನವರ - ಡಿ.ಡಬ್ಲ್ಯೂ-1

**ಅನುಬಂಧ - 5**

**ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು:**

ಎಂ.ಓ-1 - ವಾಹನ ಟೆಂಪೋ ಟ್ರ್ಯಾಕ್ಸ್ ಕೆಎ-23-ಎಂ-2409

**ಪಿ.ಎನ್. ಮುರಗೋಡ**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ಬೆಳಗಾಂವ ಜಿಲ್ಲೆ, ಬೆಳಗಾಂವ.

ಪಿ.ಆರ್. 606

## ಅಬಕಾರಿ ಅಧೀಕ್ಷಕರು ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ ಇವರ ನ್ಯಾಯಾಲಯ

**ಫಿರ್ಯಾದುದಾರರು:** **ವಿರುದ್ಧ** **ಪ್ರತಿವಾದಿಗಳು:**

ಅಬಕಾರಿ ಉಪ ನಿರೀಕ್ಷಕರು,
ಉಪ ವಿಭಾಗ, ಮಂಡ್ಯ

1) ಪುಟ್ಟಸ್ವಾಮಿ ಬಿನ್ ಹನುಮೇಗೌಡ ಯಡಗನಹಳ್ಳಿ ಗ್ರಾಮ, ಮದ್ದೂರು ತಾ.
2) ಸಿದ್ದರಾಮು ಬಿನ್ ಸಿದ್ದಯ್ಯ ಕಾಡುಕೊತ್ತೆನಹಳ್ಳಿ ಗ್ರಾಮ, ಮದ್ದೂರು ತಾ.
3) ರಮೇಶ್ ಆರ್ ಗಿಟ್ಟೇ ನಂ. 106/17, 11ನೇ ಬಿ ತಿರುವು, 10ನೇ ಮುಖ್ಯ ರಸ್ತೆ, ಮಲ್ಲೇಶ್ವರಂ, ಬೆಂಗಳೂರು-03.

ದಿನಾಂಕ: 25.12.2003 ರಂದು ಸಾಯಂಕಾಲ 7.30 ಗಂಟೆ ಸಮಯದಲ್ಲಿ ಅಬಕಾರಿ ಉಪ ನಿರೀಕ್ಷಕರು, ಉಪವಿಭಾಗ, ಮಂಡ್ಯ - ಇವರು ಮಳವಳ್ಳಿ ತಾ., ಬೆಳವಾಡಿ ಪೋರಿಗಾಲಿ ರಸ್ತೆಯ ಬಿ.ಜಿ. ಪುರದ ಸರ್ಕಾರಿ ಸ್ಕೂಲ್ ಮುಂಭಾಗದಲ್ಲಿ, ವಾಹನ ಬಜಾಜ್ ಚೇತಕ್ ಸ್ಕೂಟರ್ ಸಂಖ್ಯೆ: ಕೆಎ-04/ಜೆ-2221 ರಲ್ಲಿ 100 ಮಿ.ಲಿ. ಯ 500 ಸ್ಯಾಚೆಟ್‌ಗಳಲ್ಲಿ ಒಟ್ಟು 50 ಲೀ. ಸಾರಾಯಿ, 35 ಲೀ. ಸಾಮರ್ಥ್ಯವುಳ್ಳ ಬಿಳಿ ಪ್ಲಾಸ್ಟಿಕ್ ಕ್ಯಾನ್‌ನಲ್ಲಿ 2 ಲೀ. ಮದ್ಯಸಾರ ಮತ್ತು ಸ್ಕೂಟರ್ ಮುಂಭಾಗದ ಡಿಕ್ಕಿಯಲ್ಲಿ ಸಾರಾಯಿ ತಯಾರು ಮಾಡುವ ಸೇವನೆ ಕೈ ಯಂತ್ರ (ಸಂಖ್ಯೆ: 98/ಬಿ-14465) ವನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದ ಬಗ್ಗೆ ವಾಹನ ಮತ್ತು ಅಬಕಾರಿ ವಸ್ತುಗಳನ್ನು ಜಪ್ತು ಮಾಡಿ ಪ್ರ.ಮಾ.ವ. ಸಂಖ್ಯೆ: 22/03-04 ರಲ್ಲಿ ಕರ್ನಾಟಕ ಅಬ್ಕಾರಿ ಕಾಯಿದೆ ಕಲಂ 32, 38 (ಎ), 13(ಎಫ್), 43, 43(ಎ) ರಂತೆ ಕ್ರಮ ಜರುಗಿಸಿರುತ್ತಾರೆ.

ಈ ಪ್ರಕರಣದಲ್ಲಿ ಮೊಕದ್ದಮೆಯಲ್ಲಿ ಮಾದರಿ ತೆಗೆದ ಮದ್ಯವನ್ನು ರಾಸಾಯನಿಕ ಪ್ರಯೋಗಾಲಯಕ್ಕೆ ಕಳುಹಿಸಿ ರಾಸಾಯನಿಕ ತಜ್ಞರ ವರದಿ ಸಂಖ್ಯೆ: ಸಿಸಿಎಲ್-200/04, ದಿನಾಂಕ: 16.1.2004 ರಂತೆ ಮದ್ಯಸಾರವು ಪೋಟೆಬಲ್ ಪರ್ಪಸ್ ಎಂದು ಮತ್ತು ಸಾರಾಯಿಯು ಮಾನವ ಸೇವನೆಗೆ ಯೋಗ್ಯವೆಂದು ರಾಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿದೆ.

ಅಬಕಾರಿ ನಿರೀಕ್ಷಕರು, ಮಳವಳ್ಳಿ ವಲಯ-ರವರು ದಿನಾಂಕ: 12.2.2004 ರಂದು ವರದಿಯನ್ನು ಸಲ್ಲಿಸಿ 'ಬಿ' ವಹಿ ರೀತ್ಯ ವಾಹನ ಮಾಲೀಕರಾದ ರಮೇಶ್ ಆರ್. ಗಿಟ್ಟೆ - ಇವರು ವಾಹನವನ್ನು ಮೊದಲನೇ ಆರೋಪಿಯಾದ ಪುಟ್ಟಸ್ವಾಮಿ ಎಂಬುವವರಿಗೆ ಮಾರಾಟ ಮಾಡಿರುವುದಾಗಿ ಹಾಜರುಪಡಿಸಿರುವ ಸಂಬಂಧಪಟ್ಟ ದಾಖಲಾತಿಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿ ವಾಹನ ಮತ್ತು ಅಬ್ಕಾರಿ ವಸ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಾಧಿಕಾರದಿಂದ ದಿನಾಂಕ: 27.2.2004 ರಂದು ವಾಹನ ಮತ್ತು ಅಬ್ಕಾರಿ ವಸ್ತುಗಳನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ಕರ್ನಾಟಕ ಅಬ್ಕಾರಿ ಕಾಯಿದೆ ಕಲಂ 43(ಬಿ) ರ ಅಡಿಯಲ್ಲಿ ಆರೋಪಿತರಿಗೆ ಕಾರಣ ಕೇಳುವ ನೋಟೀಸ್ ನೀಡಲಾಗಿ 1ನೇ ಆರೋಪಿಗೆ ದಿನಾಂಕ: 5.3.2004 ರಂದು ಜಾರಿ ಮಾಡಿ ಅಬಕಾರಿ ನಿರೀಕ್ಷಕರು, ಮದ್ದೂರು ವಲಯ- ಇವರು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ಈ ಪ್ರಕರಣದ ದಾಖಲಾತಿಗಳನ್ನು ಕೂಲಂಕುಷವಾಗಿ ಪರಿಶೀಲಿಸಲಾಯಿತು. ವಶಪಡಿಸಿಕೊಂಡ ಮದ್ಯಸಾರವು "Potable purpose" ಎಂದು ಸಾರಾಯಿಯು ಮಾನವ ಸೇವನೆಗೆ ಯೋಗ್ಯವೆಂದು ರಾಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿರುತ್ತದೆ. ವಾಹನದಲ್ಲಿ ಯಾವುದೇ ಪರವಾನಗಿ ಇಲ್ಲದೇ ಅಕ್ರಮವಾಗಿ 50 ಲೀ. ಸಾರಾಯಿಯನ್ನು ಮತ್ತು ನಕಲಿ ಮದ್ಯ ತಯಾರಿಸುವ ಕೈಯಂತ್ರವನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಕಂಡುಬಂದಿರುತ್ತದೆ. ಈ ಬಗ್ಗೆ ಪ್ರತಿವಾದಿಯು ನಿರಾಕರಿಸಿರುವುದಿಲ್ಲ. ಮೊಕದ್ದಮೆ ದಾಖಲಾಗಿ ಸುಮಾರು 3 ತಿಂಗಳು ಕಳೆದರೂ ವಾಹನ ಬಿಡುಗಡೆಗಾಗಿ ಯಾವುದೇ ಪ್ರಯತ್ನ ಪ್ರತಿವಾದಿಗಳ ಕಡೆಯಿಂದ ನಡೆದಿರುವುದಿಲ್ಲ. ಈ ಕಾರಣಗಳಿಂದ ವಾಹನ ಬಿಡುಗಡೆಗಾಗಿ ಯಾರೊಬ್ಬರೂ ಮುಂದೆ ಬರುವ ಸಾಧ್ಯತೆಗಳು ಕಡಿಮೆ ಇರುವುದರಿಂದ ಇನ್ನು ಮುಂದೆ ಕಾಲಾವಕಾಶ ನೀಡುವುದು ಅನಾವಶ್ಯಕವೆಂದು ಪರಿಗಣಿಸಿ ಕರ್ನಾಟಕ ಅಬ್ಕಾರಿ ಕಾಯ್ದೆ ಕಲಂ 43(ಸಿ) ರ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಕಂಡು ಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

### ಆದೇಶ ಸಂಖ್ಯೆ: ಡಿಟಿಸಿಆರ್/212/2003-04, ದಿನಾಂಕ: 11ನೇ ಮಾರ್ಚ್ 2004

ವಿ.ಸಿ. ರಾಜಣ್ಣ, ಅಬಕಾರಿ ಅಧೀಕ್ಷಕರು ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ - ಆದ ನಾನು ಮೇಲ್ಕಂಡ ವಾಸ್ತವಾಂಶಗಳ ಹಿನ್ನೆಲೆಯಲ್ಲಿ ಅಬಕಾರಿ ಉಪ ನಿರೀಕ್ಷಕರು, ಉಪ ವಿಭಾಗ ಮಂಡ್ಯ - ರವರ ಪ್ರ.ಮಾ.ವ. ಸಂಖ್ಯೆ: 22/2003-04, ದಿನಾಂಕ: 25.12.2003 ರಲ್ಲಿ ವಶಪಡಿಸಿಕೊಂಡ ವಾಹನ ಬಜಾಜ್ ಚೇತಕ್ ಸ್ಕೂಟರ್ ಸಂಖ್ಯೆ: ಕೆಎ-04/ಜೆ-2221, 50 ಲೀ. ಸಾರಾಯಿ ಮತ್ತು ಅಬಕಾರಿ ವಸ್ತುಗಳನ್ನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43(ಸಿ) ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುತ್ತದೆ.

ಪಿ.ಆರ್. 607

ಅಬಕಾರಿ ಅಧೀಕ್ಷಕರು ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ.

## ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ, ಭದ್ರಾವತಿ ವಿಭಾಗ, ಭದ್ರಾವತಿ

### ಅಧಿಸೂಚನೆ ಸಂಖ್ಯೆ: ಎಫ್ಒಸಿ-ಸಿಓಎನ್-ಸಿಆರ್-1/04-05, ದಿನಾಂಕ: 6ನೇ ಏಪ್ರಿಲ್ 2004

ಭದ್ರಾವತಿ ವಿಭಾಗದ ವ್ಯಾಪ್ತಿಯಲ್ಲಿ ಶ್ರೀಗಂಧದ ಹಾಗೂ ಇತರೆ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ಭದ್ರಾವತಿ ವಲಯದ ರಕ್ಷಣಾ ಶಾಖೆಯ ವನಪಾಲಕರು ಮತ್ತು ಸಿಬ್ಬಂದಿಯವರು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು, ಸದರಿ ವಾಹನವನ್ನು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71(ಎ) ರ ಪ್ರಕಾರ ಕ್ರಮ ಜರುಗಿಸುವಂತೆ ಈ ನ್ಯಾಯಾಲಯಕ್ಕೆ ಹಾಜರುಪಡಿಸಲಾದ ವಾಹನಗಳ ತಪಶೀಲು ಈ ಕೆಳಕಂಡಂತಿರುತ್ತದೆ.

| ಕ್ರ.ಸಂ. | ವಾಹನಗಳ ವಿವರ | ಮೊಕದ್ದಮೆ ಸಂಖ್ಯೆ | ಯಂತ್ರದ ಸಂಖ್ಯೆ | ಛಾಸೀಸ್ ಸಂಖ್ಯೆ |
|---|---|---|---|---|
| 1 | ಟ್ರಾಕ್ಟರ್ ಮತ್ತು ಟ್ರೈಲರ್ ನಂ. ಕೆಎ-14-ಟಿ-5043- 5044 | ವಲಯ ಅರಣ್ಯಾಧಿಕಾರಿ, ಭದ್ರಾವತಿ ಇವರ ಮೊಕದ್ದಮೆ ಸಂ: 29/04-05 ದಿ: 2.4.04 | ಎನ್ಎಕ್ಸ್‌ಸಿ 261006 | ಬಿಎಸ್ಎನ್ 258401 |

ಈ ಮೇಲ್ಕಂಡ ವಾಹನದ ಬಗ್ಗೆ ಯಾರೂ ವಾರಸುದಾರರು ಇಲ್ಲಿಯವರೆಗೂ ಹಾಜರಾಗದೇ ಇರುವುದರಿಂದ ಸದರಿ ವಾಹನದ ನಿಜವಾದ ವಾರಸುದಾರರು ಯಾರಾದರೂ ಇದ್ದಲ್ಲಿ ಅವರು ವಾಹನಗಳ ಬಗ್ಗೆ ಅಧಿಕೃತ ಹಕ್ಕುಬಾಧ್ಯತೆಗಳನ್ನು ಕೆಳಸಹಿ ಮಾಡಿರುವವರ ಸಮ್ಮುಖದಲ್ಲಿ ಈ ಅಧಿಸೂಚನೆಯು ಕರ್ನಾಟಕ ಸರ್ಕಾರದ ಗೆಜೆಟ್‌ನಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು (30) ದಿನಗಳ ಒಳಗೆ ಹಾಜರುಪಡಿಸಬೇಕಾಗಿ ಮತ್ತು ವಾಹನವನ್ನು ಶ್ರೀಗಂಧ ಮತ್ತು ಇತರೆ ಉತ್ಪನ್ನವನ್ನು ಕಳ್ಳ ಸಾಗಾಣಿಕೆ ಮಾಡಲು ಉಪಯೋಗಿಸಿದ್ದಕ್ಕಾಗಿ ವಾಹನವನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಅವರುಗಳು ಅಧಿಕೃತ ಸಮಜಾಯಿಸಿಯನ್ನು ಬರಹದ ಮೂಲಕ ಇತರೆ ದಾಖಲಾತಿಗಳೊಂದಿಗೆ ಈ ಕೆಳಸಹಿದಾರರ ಸಮ್ಮುಖದಲ್ಲಿ ಹಾಜರುಪಡಿಸಲು ಈ ಮೂಲಕ ಪ್ರಕಟಿಸಲಾಗಿದೆ. ಈ ಮೇಲ್ಕಂಡ ವಾಹನದ ಬಗ್ಗೆ ಯಾವ ವಾರಸುದಾರರು ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತ ಮೂಲಕ ಯಾವುದೇ ಅರ್ಜಿಯನ್ನು ಈ ಕೆಳಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ವಾಹನವನ್ನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71(ಎ) ಎರಡನೇ ತಿದ್ದುಪಡಿ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

ಪಿ.ಆರ್. 608

ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಭದ್ರಾವತಿ ವಿಭಾಗ, ಭದ್ರಾವತಿ.

## ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ, ಭದ್ರಾವತಿ ವಿಭಾಗ, ಭದ್ರಾವತಿ

### ಅಧಿಸೂಚನೆ ಸಂಖ್ಯೆ: ಎಫ್ಒಸಿ-ಸಿಓಎನ್-ಸಿಆರ್-1/04-05, ದಿನಾಂಕ: 8ನೇ ಏಪ್ರಿಲ್ 2004

ಭದ್ರಾವತಿ ವಿಭಾಗದ ವ್ಯಾಪ್ತಿಯಲ್ಲಿ ಶ್ರೀಗಂಧದ ಹಾಗೂ ಇತರೆ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ಚನ್ನಗಿರಿ ವಲಯದ ರಕ್ಷಣಾ ಶಾಖೆಯ ವನಪಾಲಕರು ಮತ್ತು ಸಿಬ್ಬಂದಿಯವರು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು, ಸದರಿ ವಾಹನವನ್ನು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71(ಎ) ರ ಪ್ರಕಾರ ಕ್ರಮ ಜರುಗಿಸುವಂತೆ ಈ ನ್ಯಾಯಾಲಯಕ್ಕೆ ಹಾಜರುಪಡಿಸಲಾದ ವಾಹನಗಳ ತಪಶೀಲು ಈ ಕೆಳಕಂಡಂತಿರುತ್ತದೆ.

| ಕ್ರ.ಸಂ. | ವಾಹನಗಳ ವಿವರ | ಮೊಕದ್ದಮೆ ಸಂಖ್ಯೆ | ಯಂತ್ರದ ಸಂಖ್ಯೆ | ಛಾಸೀಸ್ ಸಂಖ್ಯೆ |
|---|---|---|---|---|
| 1 | ನೀಲಿ ಬಣ್ಣದ ಮಾರುತಿ 800 ಎಸ್‌ಟಿಡಿ ವ್ಯಾನು ನಂ. ಎಂಹೆಚ್-07-ಎ-7890 | ವಲಯ ಅರಣ್ಯಾಧಿಕಾರಿ, ಚನ್ನಗಿರಿ ಇವರ ಮೊಕದ್ದಮೆ ಸಂ: 1/04-05 ದಿ: 3.4.04 | 498095 | 835087 |
| | ಕೆಂಪು ಬಣ್ಣದ ಸಿಡಿ 100 ಹೀರೋ ಹೊಂಡಾ ಮೋಟಾರ್ ಸೈಕಲ್ ನಂ. ಕೆಎ-14-ಎಲ್-5074 | | 00E13E 27032 | 00F13F00118 |

ಈ ಮೇಲ್ಕಂಡ ವಾಹನದ ಬಗ್ಗೆ ಯಾರೂ ವಾರಸುದಾರರು ಇಲ್ಲಿಯವರೆಗೂ ಹಾಜರಾಗದೇ ಇರುವುದರಿಂದ ಸದರಿ ವಾಹನದ ನಿಜವಾದ ವಾರಸುದಾರರು ಯಾರಾದರೂ ಇದ್ದಲ್ಲಿ ಅವರು ವಾಹನಗಳ ಬಗ್ಗೆ ಅಧಿಕೃತ ಹಕ್ಕುಬಾಧ್ಯತೆಗಳನ್ನು ಕೆಳಸಹಿ ಮಾಡಿರುವವರ ಸಮ್ಮುಖದಲ್ಲಿ ಈ ಅಧಿಸೂಚನೆಯು ಕರ್ನಾಟಕ ಸರ್ಕಾರದ ಗೆಜೆಟ್‌ನಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು (30) ದಿನಗಳ ಒಳಗೆ ಹಾಜರುಪಡಿಸಬೇಕಾಗಿ ಮತ್ತು ವಾಹನವನ್ನು ಶ್ರೀಗಂಧ ಮತ್ತು ಇತರೆ ಉತ್ಪನ್ನವನ್ನು ಕಳ್ಳ ಸಾಗಾಣಿಕೆ ಮಾಡಲು ಉಪಯೋಗಿಸಿದ್ದಕ್ಕಾಗಿ ವಾಹನವನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಅವರುಗಳು ಅಧಿಕೃತ ಸಮಜಾಯಿಸಿಯನ್ನು ಬರಹದ ಮೂಲಕ ಇತರೆ ದಾಖಲಾತಿಗಳೊಂದಿಗೆ ಈ ಕೆಳಸಹಿದಾರರ ಸಮ್ಮುಖದಲ್ಲಿ ಹಾಜರುಪಡಿಸಲು ಈ ಮೂಲಕ ಪ್ರಕಟಿಸಲಾಗಿದೆ. ಈ ಮೇಲ್ಕಂಡ ವಾಹನದ ಬಗ್ಗೆ ಯಾವ ವಾರಸುದಾರರು ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತ ಮೂಲಕ ಯಾವುದೇ ಅರ್ಜಿಯನ್ನು ಈ

ಕೆಳಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ವಾಹನವನ್ನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71(ಎ) ಎರಡನೇ ತಿದ್ದುಪಡಿ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

ಪಿ.ಆರ್. 609 ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಭದ್ರಾವತಿ ವಿಭಾಗ, ಭದ್ರಾವತಿ.

**ಸಹಕಾರ ಸಂಘಗಳ ಸಹಾಯಕ ನಿಬಂಧಕರ ನ್ಯಾಯಾಲಯ, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ**

**ಅಧಿಭಾರ ಅರ್ಜಿ ನಂ. 6:2003-04**

**ಅರ್ಜಿದಾರರು:** **ವಿರುದ್ಧ** **ಪ್ರತಿವಾದಿಗಳು:**

ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ (ನಿ),
ಉಂಬ್ಳೇಬೈಲು, ಶಿವಮೊಗ್ಗ ತಾಲ್ಲೂಕು

ಶ್ರೀ ಕೆ.ಎಸ್. ರಾಜಶೇಖರಯ್ಯ,
ಮಾಜಿ ಕಾರ್ಯದರ್ಶಿ, ವಿಎಸ್ಎಸ್‌ಬಿಎನ್
ಉಂಬ್ಳೇಬೈಲು, ಶಿವಮೊಗ್ಗ ತಾ:

(ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 103ರ ಮೇರೆಗೆ ತೀರ್ಪು ಪೂರ್ವ ಜಪ್ತು ಆಜ್ಞೆ)

**ಪ್ರಸ್ತಾವನೆ:-**

ಅರ್ಜಿದಾರರ ಬ್ಯಾಂಕು ಈ ನ್ಯಾಯಾಲಯದಲ್ಲಿ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 69 ರಡಿಯಲ್ಲಿ ಎದುರು ಅರ್ಜಿದಾರರ ವಿರುದ್ಧ 1999 ರಿಂದ 2001ನೇ ಸಾಲಿನ ಲೆಕ್ಕಪರಿಶೋಧನಾ ವರದಿಯಂತೆ ರೂ. 84077-16 ಗಳ ಹಣ ದುರುಪಯೋಗದ ವಸೂಲಿ ಬಗ್ಗೆ ಎದುರಿಗಳ ಮೇಲೆ ಅಧಿಭಾರ ಅರ್ಜಿಯನ್ನು ದಾಖಲು ಮಾಡಿದ್ದು, ಈ ಸಂಬಂಧವಾಗಿ ದಿನಾಂಕ: 26.3.2004 ರಂದು ಅರ್ಜಿದಾರರು ಅರ್ಜಿ ಮತ್ತು ಎದುರಿಯವರ ಹೆಸರಿನಲ್ಲಿರುವ ಸ್ಥಿರಾಸ್ತಿಯ ರೆವಿನ್ಯೂ ದಾಖಲೆಗಳನ್ನು ಸಲ್ಲಿಸಿ ವಿವಾದದಲ್ಲಿನ ಮೊಬಲಗು ದೊಡ್ಡ ಮೊತ್ತವಾಗಿದ್ದು, ವಸೂಲಾತಿ ಆಗದೇ ಇರುವಂತಹ ಪರಿಸ್ಥಿತಿ ಇರುವ ಪ್ರಯುಕ್ತ ಎದುರಿಯವರ ಸ್ಥಿರಾಸ್ತಿಯನ್ನು ಅಧಿಭಾರ ಅರ್ಜಿಯಲ್ಲಿ ನೀಡಬಹುದಾದ ಡಿಕ್ರಿಯನ್ನು ನಿರರ್ಥಕಗೊಳಿಸುವ ಉದ್ದೇಶದಿಂದ ಬೇರೆಯವರಿಗೆ ಪರಭಾರೆ ಅಥವಾ ಮಾರಾಟ ಮಾಡುವ ಕ್ರಮವನ್ನು ಪ್ರತಿಬಂಧಿಸಬೇಕೆಂದು ಸಹಕಾರ ಸಂಘಗಳ ಕಾಯ್ದೆ ಕಲಂ 103 ರಡಿಯಲ್ಲಿ ತೀರ್ಪು ಪೂರ್ವ ಜಪ್ತು ಕ್ರಮ ಕೋರಿದ್ದಾರೆ. ಈ ಕೋರಿಕೆ ಯುಕ್ತವಾಗಿದೆಯೆಂದು ಸ್ವತಃ ಈ ನ್ಯಾಯಾಲಯಕ್ಕೆ ಮನವರಿಕೆಯಾಗಿದ್ದು, ಈ ಕೆಳಕಂಡ ಷರತ್ತು ಪೂರ್ವ ಜಪ್ತು ಆಜ್ಞೆಯ ನೋಟೀಸನ್ನು ಹೊರಡಿಸಲಾಗಿದೆ.

**ಆದೇಶ**

**ಕ್ರಮಾಂಕ: ಸನಿಶಿ24:ಎಬಿಎನ್:ಕಲಂ 103:2003-04, ದಿನಾಂಕ: 29ನೇ ಮಾರ್ಚ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಸಂದರ್ಭಗಳ ಹಿನ್ನೆಲೆಯಲ್ಲಿ ಎ.ಎಸ್. ಜಯಪ್ಪ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ, ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103 ರನ್ವಯ ದತ್ತವಾದ ಅಧಿಕಾರವನ್ನು ಉಪಯೋಗಿಸಿ ಈ ಆದೇಶದೊಂದಿಗೆ ಇರುವ ಅನುಸೂಚಿ (ಷೆಡ್ಯೂಲ್) ಯಲ್ಲಿ ಕಾಣಿಸಿರುವ ಸ್ಥಿರಾಸ್ತಿಗಳನ್ನು ಅಧಿಭಾರ ಅರ್ಜಿಯ ತೀರ್ಪು ಪೂರ್ವದಲ್ಲಿ ಷರತ್ತು ಪೂರ್ವಕ ಜಪ್ತುಗೊಳಿಸಲಾಗಿದೆಯೆಂದು ಆದೇಶಿಸಿದೆ.

ಎದುರು ಅರ್ಜಿದಾರರುಗಳು ತಮ್ಮ ಸ್ಥಿರಾಸ್ತಿಯನ್ನು ಷರತ್ತು ಪೂರ್ವ ಜಪ್ತು ಆಜ್ಞೆಯ ವ್ಯಾಪ್ತಿಯಿಂದ ಹೊರತರಲು ಇಚ್ಛಿಸಿದಲ್ಲಿ ಜಪ್ತುಗೊಳಿಸಲ್ಪಟ್ಟ ಆಸ್ತಿಯ ಮೌಲ್ಯಕ್ಕೆ ಮತ್ತು ನ್ಯಾಯಾಲಯ ಸರಿಯೆಂದು ಭಾವಿಸುವ ನಗದು ಭದ್ರತೆ (ಸೆಕ್ಯೂರಿಟಿ) ಯನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ ಶಿವಮೊಗ್ಗ ಇವರ ಹೆಸರಿನಲ್ಲಿ ಶಿವಮೊಗ್ಗ ಡಿಸಿಸಿ ಬ್ಯಾಂಕ್, ಶಿವಮೊಗ್ಗ ಇಲ್ಲಿ ಅಮಾನತ್ ಖಾತೆಯಲ್ಲಿ ತೊಡಗಿಸಿ ಈ ಬಗ್ಗೆ ರಶೀದಿ ಅಥವಾ ಬ್ಯಾಂಕಿನ ಚಲನ್ನಿನ ಪ್ರತಿಯನ್ನು ದಿನಾಂಕ: 17.4.2004 ರ ಒಳಗೆ ಕೆಳಸಹಿದಾರರಿಗೆ ಹಾಜರುಪಡಿಸುವ ಮೂಲಕ ಜಪ್ತು ಆಜ್ಞೆಯಿಂದ ಹೊರಗುಳಿಯಬಹುದೆಂದು ಸಹ ಸಂಬಂಧಿಸಿದವರಿಗೆ ಈ ನೋಟೀಸ್ ನೀಡಲಾಗಿದೆ. ಭದ್ರತೆಯನ್ನು ಒದಗಿಸುವ ಮತ್ತು ಷರತ್ತು ಪೂರೈಸುವುದಕ್ಕೆ ವಿಫಲರಾದಲ್ಲಿ ಈ ಷರತ್ತು ಪೂರ್ವಕ ಜಪ್ತು ಆಜ್ಞೆಯನ್ನು ಸ್ಥಿರೀಕರಿಸಲಾಗುವುದೆಂದು ತಿಳಿಯತಕ್ಕದ್ದು.

ಈ ಆದೇಶದ ಅನುಸೂಚಿಯಲ್ಲಿರುವ ಸ್ಥಿರ ಸ್ವತ್ತುಗಳನ್ನು ಪಡೆಯುವ ಅಥವಾ ಖರೀದಿಸುವ ವ್ಯಕ್ತಿ ಅಥವಾ ಸಂಸ್ಥೆಗಳು ಸಹ ಷರತ್ತು ಪೂರ್ವಕ ಜಪ್ತು ಆಜ್ಞೆಗೆ ಒಳಪಡುವರು ಎಂದು ಸಹ ಆದೇಶಿಸಿದೆ.

**ಷರತ್ತು ಪೂರ್ವಕ ಜಪ್ತು ಆದೇಶಕ್ಕೆ ಒಳಗಾದ ಸ್ವತ್ತುಗಳ ಅನುಸೂಚಿ - ಷಡ್ಯೂಲ್**

| ಕ್ರ.ಸಂ. | ಖಾತೆದಾರರ ಹೆಸರು | ಸ್ಥಿರಾಸ್ತಿ ಇರುವ ಸ್ಥಳ | ಖಾತೆ : ಸರ್ವೆ ನಂ. | ವಿಸ್ತೀರ್ಣ ಎ. ಗು. | ತರಹೆ |
|---|---|---|---|---|---|
| 1 | ಕೆ.ಎಸ್. ರಾಜಶೇಖರಯ್ಯ ಬಿನ್ ಸಿದ್ದಪ್ಪಯ್ಯ | ಶಿವಮೊಗ್ಗ ನಗರದ ಲಾಲಾ ಲಜಪತರಾಯ ರಸ್ತೆ, ವಾರ್ಡ್ ನಂ. 29 | ಖಾತೆ ನಂ. 1270: 1232: 955 | - | ಮಂಗಳೂರು ಹಂಚಿನ ಮನೆ |

**ಇದಕ್ಕೆ ಚೆಕ್ಕುಬಂದಿ**

**ಪೂರ್ವ:** ಎಲ್.ಎಲ್.ಆರ್. ರಸ್ತೆ, **ಪಶ್ಚಿಮ:** ಕನ್ವರೆವೆನ್ಸಿ ರಸ್ತೆ, **ಉತ್ತರ:** ವೀರಣ್ಣನವರ ಮನೆ, **ದಕ್ಷಿಣ:** ಬಸವಣ್ಣಪ್ಪ ರವರ ಮನೆ

ಈ ಆದೇಶವನ್ನು ನ್ಯಾಯಾಲಯದ ಮೊಹರು ಮತ್ತು ನನ್ನ ಸಹಿಯೊಂದಿಗೆ ದಿನಾಂಕ: 30.3.2004 ರಂದು ನೀಡಿದೆ.

ಪಿ.ಆರ್. 610 ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ.

## ಸಹಕಾರ ಸಂಘಗಳ ಸಹಾಯಕ ನಿಬಂಧಕರ ನ್ಯಾಯಾಲಯ, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ
## ಅಧಿಭಾರ ಅರ್ಜಿ ನಂ. 3:2003-04

**ಅರ್ಜಿದಾರರು:** ವಿರುದ್ಧ **ಪ್ರತಿವಾದಿಗಳು:**

ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ (ನಿ),
ಉಂಬ್ಳೇಬೈಲು, ಶಿವಮೊಗ್ಗ ತಾಲ್ಲೂಕು

ಶ್ರೀ ಕೆ.ಎಂ. ಚಂದ್ರಶೇಖರಪ್ಪ,
ಮಾಜಿ ಕಾರ್ಯದರ್ಶಿ, ವಿಎಸ್‌ಎಸ್‌ಬಿಎನ್
ಉಂಬ್ಳೇಬೈಲು, ಶಿವಮೊಗ್ಗ ತಾ:

(ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 103ರ ಮೇರೆಗೆ ತೀರ್ಪು ಪೂರ್ವ ಜಪ್ತು ಆಜ್ಞೆ)

**ಪ್ರಸ್ತಾವನೆ:-**

ಅರ್ಜಿದಾರರ ಬ್ಯಾಂಕು ಈ ನ್ಯಾಯಾಲಯದಲ್ಲಿ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 69 ರಡಿಯಲ್ಲಿ ಎದುರು ಅರ್ಜಿದಾರರ ವಿರುದ್ಧ 1998 ರಿಂದ 2002ನೇ ಸಾಲಿನ ಲೆಕ್ಕಪರಿಶೋಧನಾ ವರದಿಯಂತೆ ರೂ. 7984-00 ಗಳ ಹಣ ದುರುಪಯೋಗದ ವಸೂಲಿ ಬಗ್ಗೆ ಅಧಿಭಾರ ಅರ್ಜಿಯನ್ನು ದಾಖಲು ಮಾಡಿದ್ದು, ಈ ಸಂಬಂಧವಾಗಿ ದಿನಾಂಕ: 12.3.2004 ರಂದು ಅರ್ಜಿದಾರರು ಅರ್ಜಿ ಮತ್ತು ಎದುರಿಯವರ ತಂದೆಯಾದ ಶ್ರೀ ಕೆ.ಹೆಚ್. ಮಲ್ಲಪ್ಪ, ಇವರ ಹೆಸರಿನಲ್ಲಿರುವ ಸ್ಥಿರಾಸ್ತಿಯ ರೆವಿನ್ಯೂ ದಾಖಲೆಗಳನ್ನು ಸಲ್ಲಿಸಿ ವಿವಾದದಲ್ಲಿನ ದುರುಪಯೋಗದ ಮೊಬಲಗು ವಸೂಲಾತಿ ಆಗದೇ ಇರುವಂತಹ ಪರಿಸ್ಥಿತಿ ಇರುವ ಪ್ರಯುಕ್ತ, ಸದರೀ ಸ್ಥಿರಾಸ್ತಿಯನ್ನು ಅಧಿಭಾರ ಅರ್ಜಿಯಲ್ಲಿ ನೀಡಬಹುದಾದ ಡಿಕ್ರಿಯನ್ನು ನಿರರ್ಥಕಗೊಳಿಸುವ ಉದ್ದೇಶದಿಂದ ಬೇರೆಯವರಿಗೆ ಪರಭಾರೆ ಅಥವಾ ಮಾರಾಟ ಮಾಡುವ ಕ್ರಮವನ್ನು ಪ್ರತಿಬಂಧಿಸಬೇಕೆಂದು ಸಹಕಾರ ಸಂಘಗಳ ಕಾಯ್ದೆ ಕಲಂ 103 ರಡಿಯಲ್ಲಿ ತೀರ್ಪು ಪೂರ್ವ ಜಪ್ತು ಕ್ರಮ ಕೋರಿದ್ದಾರೆ. ಈ ಕೋರಿಕೆ ಯುಕ್ತವಾಗಿದೆಯೆಂದು ಸ್ವತಃ ಈ ನ್ಯಾಯಾಲಯಕ್ಕೆ ಮನವರಿಕೆಯಾಗಿದ್ದು, ಈ ಕೆಳಕಂಡ ಷರತ್ತು ಪೂರ್ವ ಜಪ್ತು ಆಜ್ಞೆಯ ನೋಟೀಸನ್ನು ಹೊರಡಿಸಲಾಗಿದೆ.

### ಆದೇಶ
### ಕ್ರಮಾಂಕ: ಸನಿಶಿ24:ಎಬಿಎನ್:ಕಲಂ 103:2003-04, ದಿನಾಂಕ: 30ನೇ ಮಾರ್ಚ್ 2004

ಪ್ರಸ್ತಾವನೆಯಲ್ಲಿ ವಿವರಿಸಿರುವ ಸಂದರ್ಭಗಳ ಹಿನ್ನೆಲೆಯಲ್ಲಿ ಎ.ಎಸ್. ಜಯಪ್ಪ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ, ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103 ರನ್ವಯ ದತ್ತವಾದ ಅಧಿಕಾರವನ್ನು ಉಪಯೋಗಿಸಿ ಈ ಆದೇಶದೊಂದಿಗೆ ಇರುವ ಅನುಸೂಚಿ (ಷೆಡ್ಯೂಲ್) ಯಲ್ಲಿ ಕಾಣಿಸಿರುವ ಸ್ಥಿರಾಸ್ತಿಗಳನ್ನು ಅಧಿಭಾರ ಅರ್ಜಿಯ ತೀರ್ಪು ಪೂರ್ವದಲ್ಲಿ ಷರತ್ತು ಪೂರ್ವಕ ಜಪ್ತುಗೊಳಿಸಲಾಗಿದೆಯೆಂದು ಆದೇಶಿಸಿದೆ.

ಎದುರು ಅರ್ಜಿದಾರರುಗಳು ತಮ್ಮ ಸ್ಥಿರಾಸ್ತಿಯನ್ನು ಷರತ್ತು ಪೂರ್ವ ಜಪ್ತು ಆಜ್ಞೆಯ ವ್ಯಾಪ್ತಿಯಿಂದ ಹೊರತರಲು ಇಚ್ಛಿಸಿದಲ್ಲಿ ಜಪ್ತುಗೊಳಿಸಲ್ಪಟ್ಟ ಆಸ್ತಿಯ ಮೌಲ್ಯಕ್ಕೆ ಮತ್ತು ನ್ಯಾಯಾಲಯ ಸರಿಯೆಂದು ಭಾವಿಸುವ ನಗದು ಭದ್ರತೆ (ಸೆಕ್ಯೂರಿಟಿ) ಯನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ ಶಿವಮೊಗ್ಗ ಇವರ ಹೆಸರಿನಲ್ಲಿ ಶಿವಮೊಗ್ಗ ಡಿಸಿಸಿ ಬ್ಯಾಂಕ್, ಶಿವಮೊಗ್ಗ ಇಲ್ಲಿ ಅಮಾನತ್ ಖಾತೆಯಲ್ಲಿ ತೊಡಗಿಸಿ ಈ ಬಗ್ಗೆ ರಶೀದಿ ಅಥವಾ ಬ್ಯಾಂಕಿನ ಚಲನ್ನಿನ ಪ್ರತಿಯನ್ನು ದಿನಾಂಕ: 17.4.2004 ರ ಒಳಗೆ ಕೆಳಸಹಿದಾರರಿಗೆ ಹಾಜರುಪಡಿಸುವ ಮೂಲಕ ಜಪ್ತು ಆಜ್ಞೆಯಿಂದ ಹೊರಗುಳಿಯಬಹುದೆಂದು ಸಹ ಸಂಬಂಧಿಸಿದವರಿಗೆ ಈ ನೋಟೀಸ್ ನೀಡಲಾಗಿದೆ. ಭದ್ರತೆಯನ್ನು ಒದಗಿಸುವ ಮತ್ತು ಷರತ್ತು ಪೂರೈಸುವುದಕ್ಕೆ ವಿಫಲರಾದಲ್ಲಿ ಈ ಷರತ್ತು ಪೂರ್ವಕ ಜಪ್ತು ಆಜ್ಞೆಯನ್ನು ಸ್ಥಿರೀಕರಿಸಲಾಗುವುದೆಂದು ತಿಳಿಯತಕ್ಕದ್ದು.

ಈ ಆದೇಶಕ್ಕೆ ಅನುಸೂಚಿಯಲ್ಲಿನ ಸ್ಥಿರ ಸ್ವತ್ತುಗಳನ್ನು ಪಡೆಯುವ ಅಥವಾ ಖರೀದಿಸುವ ವ್ಯಕ್ತಿ ಅಥವಾ ಸಂಸ್ಥೆಗಳು ಸಹ ಷರತ್ತು ಪೂರ್ವಕ ಜಪ್ತು ಆಜ್ಞೆಗೆ ಒಳಪಡುವರು ಎಂದು ಸಹ ಆದೇಶಿಸಿದೆ.

**ಷರತ್ತು ಪೂರ್ವಕ ಜಪ್ತು ಆದೇಶಕ್ಕೆ ಒಳಗಾದ ಸ್ವತ್ತುಗಳ ಅನುಸೂಚಿ - ಷೆಡ್ಯೂಲ್**

| ಕ್ರ.ಸಂ. | ಖಾತೆದಾರರ ಹೆಸರು | ಸ್ಥಿರಾಸ್ತಿ ಇರುವ ಸ್ಥಳ | ಖಾತೆ : ಸರ್ವೆ ನಂ. | ವಿಸ್ತೀರ್ಣ ಎ. ಗು. | ತರಹೆ |
|---|---|---|---|---|---|
| 1 | ಶ್ರೀ ಕೆ.ಹೆಚ್. ಮಲ್ಲಪ್ಪ ಬಿನ್ ಹಾಲಪ್ಪ | ದ್ಯಾವಿನಕೆರೆ ಗ್ರಾಮ, ಕುಂಸಿ ಹೋಬಳಿ, ಶಿವಮೊಗ್ಗ ತಾ: | ಸರ್ವೆ ನಂ. 73 ಎಂ.ಆರ್.ನಂ. 3 95-96 ಹಿಸ್ಸಾ ಪತ್ರ | 4.28 | ತರಿ ಮತ್ತು ಖುಷ್ಕಿ |

ಈ ಆದೇಶವನ್ನು ನ್ಯಾಯಾಲಯದ ಮೊಹರು ಮತ್ತು ನನ್ನ ಸಹಿಯೊಂದಿಗೆ ದಿನಾಂಕ: 30.3.2004 ರಂದು ನೀಡಿದೆ.

ಪಿ.ಆರ್. 611 ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ.

## ಸಹಕಾರ ಸಂಘಗಳ ಸಹಾಯಕ ನಿಬಂಧಕರ ನ್ಯಾಯಾಲಯ, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ
## ಅಧಿಭಾರ ಅರ್ಜಿ ನಂ. 5:2003-04

**ಅರ್ಜಿದಾರರು:** ವಿರುದ್ಧ **ಪ್ರತಿವಾದಿಗಳು:**

ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ (ನಿ),
ಉಂಬ್ಳೇಬೈಲು, ಶಿವಮೊಗ್ಗ ತಾಲ್ಲೂಕು

ಶ್ರೀ ಎಸ್.ಎಂ. ತಿಮ್ಮಯ್ಯ,
ಮಾಜಿ ಕಾರ್ಯದರ್ಶಿ, ಗರಗ ಅಂಚೆ,
ಚನ್ನಗಿರಿ ತಾ: ದಾವಣಗೆರೆ ಜಿಲ್ಲೆ.

(ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 103ರ ಮೇರೆಗೆ ತೀರ್ಪು ಪೂರ್ವ ಜಪ್ತು ಆಜ್ಞೆ)

**ಪ್ರಸ್ತಾವನೆ:-**

ಅರ್ಜಿದಾರರ ಬ್ಯಾಂಕು ಈ ನ್ಯಾಯಾಲಯದಲ್ಲಿ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 69 ರಡಿಯಲ್ಲಿ ಎದುರು ಅರ್ಜಿದಾರರ ವಿರುದ್ಧ 1999 ರಿಂದ 2001ನೇ ಸಾಲಿನ ಲೆಕ್ಕಪರಿಶೋಧನಾ ವರದಿಯಂತೆ ರೂ. 144411-65 ಗಳ ಹಣ ದುರುಪಯೋಗದ ವಸೂಲಿ ಬಗ್ಗೆ ಎದುರಿಗಳ ಮೇಲೆ ಅಧಿಭಾರ ಅರ್ಜಿಯನ್ನು ದಾಖಲು ಮಾಡಿದ್ದು, ಈ ಸಂಬಂಧವಾಗಿ ದಿನಾಂಕ: 19.3.2004 ರಂದು ಅರ್ಜಿದಾರರು ಅರ್ಜಿ ಮತ್ತು ಎದುರಿಯವರ ಪತ್ನಿಯಾದ ಶ್ರೀಮತಿ ಜಯಮ್ಮ ಕೋಂ ತಿಮ್ಮಯ್ಯ ಇವರ ಹೆಸರಿನಲ್ಲಿರುವ ಸ್ಥಿರಾಸ್ತಿಯ ರೆವಿನ್ಯೂ ದಾಖಲೆಗಳನ್ನು ಸಲ್ಲಿಸಿ ವಿವಾದದಲ್ಲಿನ ಮೊಬಲಗು ದೊಡ್ಡ ಮೊತ್ತವಾಗಿದ್ದು, ವಸೂಲಾತಿ ಆಗದೇ ಇರುವಂತಹ ಪರಿಸ್ಥಿತಿ ಇರುವ ಪ್ರಯುಕ್ತ, ಸದರೀ ಸ್ಥಿರಾಸ್ತಿಯನ್ನು ಅಧಿಭಾರ ಅರ್ಜಿಯಲ್ಲಿ ನೀಡಬಹುದಾದ ಡಿಕ್ರಿಯನ್ನು ನಿರರ್ಥಕಗೊಳಿಸುವ ಉದ್ದೇಶದಿಂದ ಬೇರೆಯವರಿಗೆ ಪರಭಾರೆ ಅಥವಾ ಮಾರಾಟ ಮಾಡುವ ಕ್ರಮವನ್ನು ಪ್ರತಿಬಂಧಿಸಬೇಕೆಂದು ಸಹಕಾರ ಸಂಘಗಳ ಕಾಯ್ದೆ ಕಲಂ 103 ರಡಿಯಲ್ಲಿ ತೀರ್ಪು ಪೂರ್ವ ಜಪ್ತು ಕ್ರಮ ಕೋರಿದ್ದಾರೆ. ಈ ಕೋರಿಕೆ ಯುಕ್ತವಾಗಿದೆಯೆಂದು ಸ್ವತಃ ಈ ನ್ಯಾಯಾಲಯಕ್ಕೆ ಮನವರಿಕೆಯಾಗಿದ್ದು, ಈ ಕೆಳಕಂಡ ಷರತ್ತು ಪೂರ್ವ ಜಪ್ತು ಆಜ್ಞೆಯ ನೋಟೀಸನ್ನು ಹೊರಡಿಸಲಾಗಿದೆ.

**ಆದೇಶ**

**ಕ್ರಮಾಂಕ: ಸನಿಶಿ24:ಎಬಿಎನ್:ಕಲಂ 103:2003-04, ದಿನಾಂಕ: 29ನೇ ಮಾರ್ಚ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಸಂದರ್ಭಗಳ ಹಿನ್ನೆಲೆಯಲ್ಲಿ ಎ.ಎಸ್. ಜಯಪ್ಪ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ, ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103 ರನ್ವಯ ದತ್ತವಾದ ಅಧಿಕಾರವನ್ನು ಉಪಯೋಗಿಸಿ ಈ ಆದೇಶದೊಂದಿಗೆ ಇರುವ ಅನುಸೂಚಿ (ಷೆಡ್ಯೂಲ್) ಯಲ್ಲಿ ಕಾಣಿಸಿರುವ ಸ್ಥಿರಾಸ್ತಿಗಳನ್ನು ಅಧಿಭಾರ ಅರ್ಜಿಯ ತೀರ್ಪು ಪೂರ್ವದಲ್ಲಿ ಷರತ್ತು ಪೂರ್ವಕ ಜಪ್ತುಗೊಳಿಸಲಾಗಿದೆಯೆಂದು ಆದೇಶಿಸಿದೆ.

ಎದುರು ಅರ್ಜಿದಾರರುಗಳು ತಮ್ಮ ಸ್ಥಿರಾಸ್ತಿಯನ್ನು ಷರತ್ತು ಪೂರ್ವ ಜಪ್ತು ಆಜ್ಞೆಯ ವ್ಯಾಪ್ತಿಯಿಂದ ಹೊರತರಲು ಇಚ್ಛಿಸಿದಲ್ಲಿ ಜಪ್ತುಗೊಳಿಸಲ್ಪಟ್ಟ ಆಸ್ತಿಯ ಮೌಲ್ಯಕ್ಕೆ ಮತ್ತು ನ್ಯಾಯಾಲಯ ಸರಿಯೆಂದು ಭಾವಿಸುವ ನಗದು ಭದ್ರತೆ (ಸೆಕ್ಯೂರಿಟಿ) ಯನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ ಇವರ ಹೆಸರಿನಲ್ಲಿ ಶಿವಮೊಗ್ಗ ಡಿಸಿಸಿ ಬ್ಯಾಂಕ್, ಶಿವಮೊಗ್ಗ ಇಲ್ಲಿ ಅಮಾನತ್ ಖಾತೆಯಲ್ಲಿ ತೊಡಗಿಸಿ ಈ ಬಗ್ಗೆ ರಶೀದಿ ಅಥವಾ ಬ್ಯಾಂಕಿನ ಚಲನ್ನಿನ ಪ್ರತಿಯನ್ನು ದಿನಾಂಕ: 17.4.2004 ರ ಒಳಗೆ ಕೆಳಸಹಿದಾರರಿಗೆ ಹಾಜರುಪಡಿಸುವ ಮೂಲಕ ಜಪ್ತು ಆಜ್ಞೆಯಿಂದ ಹೊರಗುಳಿಯಬಹುದೆಂದು ಸಹ ಸಂಬಂಧಿಸಿದವರಿಗೆ ಈ ನೋಟೀಸ್ ನೀಡಲಾಗಿದೆ. ಭದ್ರತೆಯನ್ನು ಒದಗಿಸುವ ಮತ್ತು ಷರತ್ತು ಪೂರೈಸುವುದಕ್ಕೆ ವಿಫಲರಾದಲ್ಲಿ ಈ ಷರತ್ತು ಪೂರ್ವಕ ಜಪ್ತು ಆಜ್ಞೆಯನ್ನು ಸ್ಥಿರೀಕರಿಸಲಾಗುವುದೆಂದು ತಿಳಿಯತಕ್ಕದ್ದು.

ಈ ಆದೇಶಕ್ಕೆ ಅನುಸೂಚಿಯಲ್ಲಿನ ಸ್ಥಿರ ಸ್ವತ್ತುಗಳನ್ನು ಪಡೆಯುವ ಅಥವಾ ಖರೀದಿಸುವ ವ್ಯಕ್ತಿ ಅಥವಾ ಸಂಸ್ಥೆಗಳು ಸಹ ಷರತ್ತು ಪೂರ್ವಕ ಜಪ್ತು ಆಜ್ಞೆಗೆ ಒಳಪಡುವರು ಎಂದು ಸಹ ಆದೇಶಿಸಿದೆ.

**ಷರತ್ತು ಪೂರ್ವಕ ಜಪ್ತು ಆದೇಶಕ್ಕೆ ಒಳಗಾದ ಸ್ವತ್ತುಗಳ ಅನುಸೂಚಿ - ಷಡ್ಯೂಲ್**

| ಕ್ರ.ಸಂ. | ಖಾತೆದಾರರ ಹೆಸರು | ಸ್ಥಿರಾಸ್ತಿ ಇರುವ ಸ್ಥಳ | ಖಾತೆ : ಸರ್ವೆ ನಂ. | ವಿಸ್ತೀರ್ಣ ಎ. ಗು. | ತರಹೆ |
|---|---|---|---|---|---|
| 1 | ಜಯಮ್ಮ ಕೋಂ ತಿಮ್ಮಯ್ಯ | ಗರಗ ಗ್ರಾಮ, ಚನ್ನಗಿರಿ ಕಸಬಾ ಮತ್ತು ತಾ: | ಸರ್ವೆ ನಂ. 43 ಕ್ರಯ ಎಂಆರ್13: 88-89 | 5.00 | ಖುಷ್ಕಿ |

ಈ ಆದೇಶವನ್ನು ನ್ಯಾಯಾಲಯದ ಮೊಹರು ಮತ್ತು ನನ್ನ ಸಹಿಯೊಂದಿಗೆ ದಿನಾಂಕ: 29.3.2004 ರಂದು ನೀಡಿದೆ.

ಪಿ.ಆರ್. 612 ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ.

**ಸಹಕಾರ ಸಂಘಗಳ ಉಪನಿಬಂಧಕರ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ**

**ವಿಷಯ:** ಚಿಂತಾಮಣಿ ತಾಲ್ಲೂಕು ಗಡಿಗವಾರ ಪಲ್ಲಿ ವೃಕ್ಷ ಬೆಳೆಗಾರರ ಸಹಕಾರ ಸಂಘ (ನಿ) ಇದರ ನೋಂದಣಿಯನ್ನು ರದ್ದುಪಡಿಸುವ ಬಗ್ಗೆ.

**ಉಲ್ಲೇಖ:** 1) ಈ ಕಛೇರಿ ಆದೇಶ ಸಂಖ್ಯೆ: ಎಲ್‌ಕ್ಯೂಡಿ: 30: 1999-2000, ದಿನಾಂಕ: 23.10.99.

2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ ರವರ ಪತ್ರ ಸಂಖ್ಯೆ: ಸನಿ48:ಸಮಾಪನೆ:11:2003-04, ದಿನಾಂಕ: 24.1.2004.

**ಪೀಠಿಕೆ:**

ಚಿಂತಾಮಣಿ ತಾಲ್ಲೂಕು ಗಡಿಗವಾರಪಲ್ಲಿ ವೃಕ್ಷ ಬೆಳೆಗಾರರ ಸಹಕಾರ ಸಂಘ ನಿಯಮಿತ ಈ ಸಂಘವು ಕಾರ್ಯನಿರ್ವಹಿಸದೇ ಸ್ಥಗಿತಗೊಂಡಿದ್ದರಿಂದ ಈ ಕಛೇರಿಯ ಉಲ್ಲೇಖ (1)ರ ಆದೇಶದಲ್ಲಿ ಸಂಘವನ್ನು ಋಣ ಸಮಾಪನೆಗೊಳಿಸಿ ಶ್ರೀ ಆರ್. ಚಿನ್ನಸ್ವಾಮಿರಾಜು, ಸಹಕಾರ ಅಭಿವೃದ್ಧಿ ಅಧಿಕಾರಿಗಳು, (ಪ್ರಭಾರ), ಚಿಂತಾಮಣಿ ಇವರನ್ನು ಸಂಘದ ಸಮಾಪನಾ ಅಧಿಕಾರಿಯಾಗಿ ನೇಮಿಸಲಾಗಿತ್ತು.

ಸಂಘದ ಸಮಾಪನಾ ಅಧಿಕಾರಿಗಳು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ, ಇವರಿಗೆ ನೋಂದಣಿಯನ್ನು ರದ್ದುಪಡಿಸಲು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಉಲ್ಲೇಖ (2) ರ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ, ಇವರು ಸಂಘದ ನೋಂದಣಿಯನ್ನು ರದ್ದುಪಡಿಸುವಂತೆ ಕೋರಿ ಈ ಕಛೇರಿಗೆ ಪ್ರಸ್ತಾವನೆಯನ್ನು ಸಲ್ಲಿಸಿ ಶಿಫಾರಸ್ಸು ಮಾಡಿರುತ್ತಾರೆ. ಸಮಾಪನಾ ಅಧಿಕಾರಿಗಳು, ಸಂಘದ ಆಸ್ತಿ ಜವಾಬ್ದಾರಿಯನ್ನು ವಿಲೇವಾರಿ ಮಾಡಿ ಶೂನ್ಯ ಆಸ್ತಿ ಜವಾಬ್ದಾರಿ ತಃಖ್ತೆಯನ್ನು ಸಲ್ಲಿಸಿರುತ್ತಾರೆ.

ಹಾಗೂ ಸಂಘದಿಂದ ಸರ್ಕಾರಕ್ಕೆ ಯಾವುದೇ ಹಣವನ್ನು ಪಾವತಿ ಮಾಡಲು ಬಾಕಿ ಇರುವುದಿಲ್ಲ ಎಂದು ವರದಿ ಸಲ್ಲಿಸಿರುತ್ತಾರೆ. ಈ ರೀತಿ ಸಮಾಪನಾ ಸಂಘದ ಆಸ್ತಿ ಮತ್ತು ಜವಾಬ್ದಾರಿಯನ್ನು ವಿಲೇವಾರಿ ಮಾಡಿರುವುದು ಸೂಕ್ತವಾಗಿರುವುದರಿಂದ ಹಾಗೂ ಸಂಘವನ್ನು ಮುಂದುವರಿಸಿಕೊಂಡು ಹೋಗುವುದರಿಂದ ಯಾವುದೇ ಪ್ರಯೋಜನ ಇಲ್ಲದಿರುವುದರಿಂದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ, ಇವರ ಶಿಫಾರಸ್ಸಿನ ಅನ್ವಯ ಪರಿಗಣಿಸಿ ಈ ಸಂಘದ ನೋಂದಣಿಯನ್ನು ರದ್ದುಪಡಿಸಲು ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: ಡಿಆರ್‌ಕೆ:ಎಲ್‌ಕ್ಯೂಡಿ:30/1999-2000, ದಿನಾಂಕ: 24ನೇ ಫೆಬ್ರವರಿ 2004**

ಪೀಠಿಕೆಯಲ್ಲಿ ತಿಳಿಸಿರುವ ಕಾರಣಗಳಿಗಾಗಿ ಚಿಂತಾಮಣಿ ತಾಲ್ಲೂಕು ಗಡಿಗವಾರಪಲ್ಲಿ ವೃಕ್ಷ ಬೆಳೆಗಾರರ ಸಹಕಾರ ಸಂಘ (ನಿ) ಚಿಂತಾಮಣಿ ತಾಲ್ಲೂಕು. ಈ ಸಂಘದ ನೋಂದಣಿ ಸಂಖ್ಯೆ: ಎಆರ್.48:21239:94-95, ದಿನಾಂಕ: 23.9.1996 ಅನ್ನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ಕಲಂ 75 ರಂತೆ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎಂ:2001, ದಿನಾಂಕ: 21.11.2001 ರ ಅನ್ವಯ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಶ್ರೀ ಬಿ.ಸಿ. ಸತೀಶ್, ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಆದ ನಾನು ರದ್ದುಪಡಿಸಿ ಆದೇಶಿಸಲಾಗಿದೆ. ಹಾಗೂ ಸಮಾಪನಾ ಅಧಿಕಾರಿಗಳು, ಸಂಘದ ಸಂಬಂಧಿಸಿದ ದಾಖಲಾತಿಗಳನ್ನು 30 ದಿನಗಳೊಳಗೆ ಈ ಕಛೇರಿಗೆ ಸಲ್ಲಿಸುವಂತೆ ಆದೇಶವನ್ನು ಮಾಡಲಾಗಿರುತ್ತದೆ.

ಈ ಆದೇಶವನ್ನು ಈ ದಿನ ಅಂದರೆ ದಿನಾಂಕ: 24.2.2004 ರಂದು ನನ್ನ ಸಹಿ ಹಾಗೂ ಈ ಕಛೇರಿಯ ಮೊಹರಿನೊಂದಿಗೆ ಹೊರಡಿಸಿದೆ.

ಪಿ.ಆರ್. 613 ಸಹಕಾರ ಸಂಘಗಳ ಉಪ ನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ.

**ಸಹಕಾರ ಸಂಘಗಳ ಉಪನಿಬಂಧಕರ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ**

**ವಿಷಯ:** ಗೌರಿಬಿದನೂರು ತಾಲ್ಲೂಕು ಅನೂಡಿ ಹಾಲು ಉತ್ಪಾದಕರ ಸಹಕಾರ ಸಂಘ ನಿಯಮಿತ ಇದರ ನೋಂದಣಿಯನ್ನು ರದ್ದುಪಡಿಸುವ ಬಗ್ಗೆ.

**ಉಲ್ಲೇಖ:** 1) ಈ ಕಛೇರಿಯ ಆದೇಶ ಸಂಖ್ಯೆ: ಡಿಆರ್‌ಕೆ:ಎಲ್‌ಕ್ಯೂಡಿ:ಸಿಆರ್. 35: 1999-2000, ದಿನಾಂಕ: 15.9.99.
2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ ಕ್ರ.ಸಂಖ್ಯೆ: ಸನಿ48:ಸಮಾಪನೆ:9:2003-04, ದಿನಾಂಕ: 24.1.2004.

**ಪೀಠಿಕೆ:**

ಗೌರಿಬಿದನೂರು ತಾಲ್ಲೂಕು ಅನೂಡಿ ಹಾಲು ಉತ್ಪಾದಕರ ಸಹಕಾರ ಸಂಘ ನಿಯಮಿತ, ಈ ಸಂಘವು ಕಾರ್ಯನಿರ್ವಹಿಸದೇ ಸ್ಥಗಿತಗೊಂಡಿದ್ದರಿಂದ ಈ ಕಛೇರಿಯ ಉಲ್ಲೇಖ (1)ರ ಆದೇಶದಲ್ಲಿ ಸಂಘವನ್ನು ಋಣ ಸಮಾಪನೆಗೊಳಿಸಿ ಶ್ರೀ ಎಂ. ಅನಂತಮೂರ್ತಿ, ಸಹಕಾರ ಸಂಘಗಳ ಅಭಿವೃದ್ಧಿ ಅಧಿಕಾರಿ (ಪ್ರಭಾರ), ಗೌರಿಬಿದನೂರು ಇವರನ್ನು ಸಂಘದ ಸಮಾಪನಾ ಅಧಿಕಾರಿಯಾಗಿ ನೇಮಿಸಲಾಗಿತ್ತು.

ಸಂಘದ ಸಮಾಪನಾ ಅಧಿಕಾರಿಗಳು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ, ಇವರಿಗೆ ನೋಂದಣಿಯನ್ನು ರದ್ದುಪಡಿಸಲು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಉಲ್ಲೇಖ (2) ರ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ, ಇವರು ಸಂಘದ ನೋಂದಣಿಯನ್ನು ರದ್ದುಪಡಿಸುವಂತೆ ಕೋರಿ ಈ ಕಛೇರಿಗೆ ಪ್ರಸ್ತಾವನೆಯನ್ನು ಸಲ್ಲಿಸಿ ಶಿಫಾರಸ್ಸು ಮಾಡಿರುತ್ತಾರೆ. ಸಮಾಪನಾ ಅಧಿಕಾರಿಗಳು, ಸಂಘದ ಆಸ್ತಿ ಜವಾಬ್ದಾರಿಯನ್ನು ವಿಲೇವಾರಿ ಮಾಡಿ ಶೂನ್ಯ ಆಸ್ತಿ ಜವಾಬ್ದಾರಿ ತಃಖ್ತೆಯನ್ನು ಸಲ್ಲಿಸಿರುತ್ತಾರೆ. ಹಾಗೂ ಸಂಘದಿಂದ ಸರ್ಕಾರಕ್ಕೆ ಯಾವುದೇ ಹಣವನ್ನು ಪಾವತಿ ಮಾಡಲು ಬಾಕಿ ಇರುವುದಿಲ್ಲ ಎಂದು ವರದಿ ಸಲ್ಲಿಸಿರುತ್ತಾರೆ. ಈ ರೀತಿ ಸಮಾಪನಾ ಸಂಘದ ಆಸ್ತಿ ಮತ್ತು ಜವಾಬ್ದಾರಿಯನ್ನು ವಿಲೇವಾರಿ ಮಾಡಿರುವುದು ಸೂಕ್ತವಾಗಿರುವುದರಿಂದ ಹಾಗೂ ಸಂಘವನ್ನು ಮುಂದುವರಿಸಿಕೊಂಡು ಹೋಗುವುದರಿಂದ ಯಾವುದೇ ಪ್ರಯೋಜನ ಇಲ್ಲದಿರುವುದರಿಂದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ, ಇವರ ಶಿಫಾರಸ್ಸಿನ ಅನ್ವಯ ಪರಿಗಣಿಸಿ ಈ ಸಂಘದ ನೋಂದಣಿಯನ್ನು ರದ್ದುಪಡಿಸಲು ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: ಡಿಆರ್‌ಕೆ:ಎಲ್‌ಕ್ಯೂಡಿ:35/1999-2000, ದಿನಾಂಕ: 24ನೇ ಫೆಬ್ರವರಿ 2004**

ಪೀಠಿಕೆಯಲ್ಲಿ ತಿಳಿಸಿರುವ ಕಾರಣಗಳಿಗಾಗಿ ಗೌರಿಬಿದನೂರು ತಾಲ್ಲೂಕು ಅನೂಡಿ ಹಾಲು ಉತ್ಪಾದಕರ ಸಹಕಾರ ಸಂಘ ನಿಯಮಿತ ಈ ಸಂಘದ ನೋಂದಣಿ ಸಂಖ್ಯೆ: ಎಆರ್:ಆರ್‌ಜಿಎನ್:ಸಿಆರ್.59:ಆರ್‌ಸಿಎಸ್:5897:78-79, ದಿನಾಂಕ: 31.3.79 ಅನ್ನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ಕಲಂ 75 ರಂತೆ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎಂ: 2001, ದಿನಾಂಕ: 21.11.2001 ರ ಅನ್ವಯ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಶ್ರೀ ಬಿ.ಸಿ. ಸತೀಶ್, ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಆದ ನಾನು ರದ್ದುಪಡಿಸಿ ಆದೇಶಿಸಲಾಗಿದೆ. ಹಾಗೂ ಸಮಾಪನಾ ಅಧಿಕಾರಿಗಳು, ಸಂಘದ ಸಂಬಂಧಿಸಿದ ದಾಖಲಾತಿಗಳನ್ನು 30 ದಿನಗಳೊಳಗೆ ಈ ಕಛೇರಿಗೆ ಸಲ್ಲಿಸುವಂತೆ ಆದೇಶವನ್ನು ಮಾಡಲಾಗಿರುತ್ತದೆ.

ಈ ಆದೇಶವನ್ನು ಈ ದಿನ ಅಂದರೆ ದಿನಾಂಕ: 24.2.2004 ರಂದು ನನ್ನ ಸಹಿ ಹಾಗೂ ಈ ಕಛೇರಿಯ ಮೊಹರಿನೊಂದಿಗೆ ಹೊರಡಿಸಿದೆ.

ಪಿ.ಆರ್. 614 ಸಹಕಾರ ಸಂಘಗಳ ಉಪ ನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ.

## ಸಹಕಾರ ಸಂಘಗಳ ಉಪನಿಬಂಧಕರ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ

**ವಿಷಯ:** ಬಂಗಾರಪೇಟೆ ತಾಲ್ಲೂಕು ಚಿನ್ನಗಾನಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ (ನಿ) ಇದರ ನೋಂದಣಿಯನ್ನು ರದ್ದುಪಡಿಸುವ ಬಗ್ಗೆ.

**ಉಲ್ಲೇಖ:** 1) ಈ ಕಛೇರಿಯ ಆದೇಶ ಸಂಖ್ಯೆ: ಎಲ್‌ಕ್ಯೂಡಿ:ಸಿಆರ್. 30: 2001-2002, ದಿನಾಂಕ: 30.5.2001.

2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ರವರ ಪತ್ರ ಸಂಖ್ಯೆ: ಎಆರ್.49:ಎಲ್‌ಕ್ಯೂಡಿ:ಸಿಆರ್.19:2001-02, ದಿನಾಂಕ: 20.2.2004.

**ಪೀಠಿಕೆ:**

ಬಂಗಾರಪೇಟೆ ತಾಲ್ಲೂಕು ಚಿನ್ನಗಾನಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ (ನಿ), ಈ ಸಂಘವು ಕಾರ್ಯನಿರ್ವಹಿಸದೇ ಸ್ಥಗಿತಗೊಂಡಿದ್ದರಿಂದ ಈ ಕಛೇರಿಯ ಉಲ್ಲೇಖ (1)ರ ಆದೇಶದಲ್ಲಿ ಸಂಘವನ್ನು ಋಣ ಸಮಾಪನೆಗೊಳಿಸಿ ಶ್ರೀ ಎಂ. ಗಂಗಪ್ಪ, ಸಹಕಾರ ಸಂಘಗಳ ನಿರೀಕ್ಷಕರು (ಪ್ರಭಾರ), ಬಂಗಾರಪೇಟೆ, ಇವರನ್ನು ಸಂಘದ ಸಮಾಪನಾ ಅಧಿಕಾರಿಯಾಗಿ ನೇಮಿಸಲಾಗಿತ್ತು.

ಸಂಘದ ಸಮಾಪನಾ ಅಧಿಕಾರಿಗಳು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ, ಇವರಿಗೆ ನೋಂದಣಿಯನ್ನು ರದ್ದುಪಡಿಸಲು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಉಲ್ಲೇಖ (2) ರ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರು ಸಂಘದ ನೋಂದಣಿಯನ್ನು ರದ್ದುಪಡಿಸುವಂತೆ ಕೋರಿ ಈ ಕಛೇರಿಗೆ ಪ್ರಸ್ತಾವನೆಯನ್ನು ಸಲ್ಲಿಸಿ ಶಿಫಾರಸ್ಸು ಮಾಡಿರುತ್ತಾರೆ. ಸಮಾಪನಾ ಅಧಿಕಾರಿಗಳು, ಸಂಘದ ಆಸ್ತಿ ಜವಾಬ್ದಾರಿಯನ್ನು ವಿಲೇವಾರಿ ಮಾಡಿ ಶೂನ್ಯ ಆಸ್ತಿ ಜವಾಬ್ದಾರಿ ತಃಖ್ತೆಯನ್ನು ಸಲ್ಲಿಸಿರುತ್ತಾರೆ. ಹಾಗೂ ಸಂಘದಿಂದ ಸರ್ಕಾರಕ್ಕೆ ಯಾವುದೇ ಹಣವನ್ನು ಪಾವತಿ ಮಾಡಲು ಬಾಕಿ ಇರುವುದಿಲ್ಲ ಎಂದು ವರದಿ ಸಲ್ಲಿಸಿರುತ್ತಾರೆ. ಈ ರೀತಿ ಸಮಾಪನಾ ಸಂಘದ ಆಸ್ತಿ ಮತ್ತು ಜವಾಬ್ದಾರಿಯನ್ನು ವಿಲೇವಾರಿ ಮಾಡಿರುವುದು ಸೂಕ್ತವಾಗಿರುವುದರಿಂದ ಹಾಗೂ ಸಂಘವನ್ನು ಮುಂದುವರಿಸಿಕೊಂಡು ಹೋಗುವುದರಿಂದ ಯಾವುದೇ ಪ್ರಯೋಜನ ಇಲ್ಲದಿರುವುದರಿಂದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರ ಶಿಫಾರಸ್ಸಿನ ಅನ್ವಯ ಪರಿಗಣಿಸಿ ಈ ಸಂಘದ ನೋಂದಣಿಯನ್ನು ರದ್ದುಪಡಿಸಲು ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

### ಆದೇಶ

### ಸಂಖ್ಯೆ: ಡಿಆರ್‌ಕೆ:ಎಲ್‌ಕ್ಯೂಡಿ:31/2003-04, ದಿನಾಂಕ: 24ನೇ ಫೆಬ್ರವರಿ 2004

ಪೀಠಿಕೆಯಲ್ಲಿ ತಿಳಿಸಿರುವ ಕಾರಣಗಳಿಗಾಗಿ ಬಂಗಾರಪೇಟೆ ತಾಲ್ಲೂಕು ಚಿನ್ನಗಾನಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ (ನಿ) ಈ ಸಂಘದ ನೋಂದಣಿ ಸಂಖ್ಯೆ: ಎಆರ್‌ಕೆ:ಬಿಸಿ:ಸಿಆರ್.80:ನೋಂದಣಿ:17279:90-91, ದಿನಾಂಕ: 10.4.1990 ಅನ್ನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ಕಲಂ 75 ರಂತೆ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎಂ: 2001, ದಿನಾಂಕ: 21.11.2001 ರ ಅನ್ವಯ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಶ್ರೀ ಬಿ.ಸಿ. ಸತೀಶ್, ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಆದ ನಾನು ರದ್ದುಪಡಿಸಿ ಆದೇಶಿಸಲಾಗಿದೆ. ಹಾಗೂ ಸಮಾಪನಾ ಅಧಿಕಾರಿಗಳು, ಸಂಘದ ಸಂಬಂಧಿಸಿದ ದಾಖಲಾತಿಗಳನ್ನು 30 ದಿನಗಳೊಳಗೆ ಈ ಕಛೇರಿಗೆ ಸಲ್ಲಿಸುವಂತೆ ಆದೇಶವನ್ನು ಮಾಡಲಾಗಿರುತ್ತದೆ.

ಈ ಆದೇಶವನ್ನು ಈ ದಿನ ಅಂದರೆ ದಿನಾಂಕ: 24.2.2004 ರಂದು ನನ್ನ ಸಹಿ ಹಾಗೂ ಈ ಕಛೇರಿಯ ಮೊಹರಿನೊಂದಿಗೆ ಹೊರಡಿಸಿದೆ.

ಪಿ.ಆರ್. 615 ಸಹಕಾರ ಸಂಘಗಳ ಉಪ ನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ.

## ಸಹಕಾರ ಸಂಘಗಳ ಉಪನಿಬಂಧಕರ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ

**ವಿಷಯ:** ಗೌರಿಬಿದನೂರು ತಾಲ್ಲೂಕು ಬಾಪೂಜಿ ಅವಲಕ್ಕಿ ಮತ್ತು ಹುರಿಗಡಲೆ ತಯಾರಿಸುವವರ ಸಹಕಾರ ಸಂಘ ನಿಯಮಿತ, ಗೌರಿಬಿದನೂರು ಇದರ ನೋಂದಣಿಯನ್ನು ರದ್ದುಪಡಿಸುವ ಬಗ್ಗೆ.

**ಉಲ್ಲೇಖ:** 1) ಈ ಕಛೇರಿಯ ಆದೇಶ ಸಂಖ್ಯೆ: ಡಿಆರ್‌ಕೆ:ಎಲ್‌ಕ್ಯೂಡಿ:36: 1998-99, ದಿನಾಂಕ: 20.8.1988.

2) ಕ್ರಮ ಸಂಖ್ಯೆ: ಸನಿ:48:ಸಮಾಪನೆ:10:2003-04, ದಿನಾಂಕ: 24.1.2004 ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿಕ್ಕಬಳ್ಳಾಪುರ ಇವರ ಪತ್ರ.

**ಪೀಠಿಕೆ:**

ಗೌರಿಬಿದನೂರು ಬಾಪೂಜಿ ಅವಲಕ್ಕಿ ಮತ್ತು ಹುರಿಗಡಲೆ ತಯಾರಿಸುವವರ ಸಹಕಾರ ಸಂಘ ನಿಯಮಿತ, ಗೌರಿಬಿದನೂರು ಈ ಸಂಘವು ಕಾರ್ಯನಿರ್ವಹಿಸದೇ ಸ್ಥಗಿತಗೊಂಡಿದ್ದರಿಂದ ಈ ಕಛೇರಿಯ ಉಲ್ಲೇಖ (1)ರ ಆದೇಶದಲ್ಲಿ ಸಂಘವನ್ನು ಋಣ ಸಮಾಪನೆಗೊಳಿಸಿ ಶ್ರೀ ಅನಂತಮೂರ್ತಿ, ಸಹಕಾರ ಅಭಿವೃದ್ಧಿ ಅಧಿಕಾರಿಗಳು, ಗೌರಿಬಿದನೂರು, ಇವರನ್ನು ಸಂಘದ ಸಮಾಪನಾ ಅಧಿಕಾರಿಯಾಗಿ ನೇಮಿಸಲಾಗಿತ್ತು.

ಸಂಘದ ಸಮಾಪನಾಧಿಕಾರಿಗಳು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿಕ್ಕಬಳ್ಳಾಪುರ, ಇವರಿಗೆ ನೋಂದಣಿಯನ್ನು ರದ್ದುಪಡಿಸಲು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಉಲ್ಲೇಖ (2) ರ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ ಇವರು ಸಂಘದ ನೋಂದಣಿಯನ್ನು ರದ್ದುಪಡಿಸುವಂತೆ ಕೋರಿ ಈ ಕಛೇರಿಗೆ ಪ್ರಸ್ತಾವನೆಯನ್ನು ಸಲ್ಲಿಸಿ ಶಿಫಾರಸ್ಸು ಮಾಡಿರುತ್ತಾರೆ. ಸಮಾಪನಾ ಅಧಿಕಾರಿಗಳು, ಶೂನ್ಯ ಆಸ್ತಿ ಜವಾಬ್ದಾರಿ ತಃಖ್ತೆಯನ್ನು ಸಲ್ಲಿಸಿರುತ್ತಾರೆ.

ಸಂಘದಿಂದ ಸರ್ಕಾರಕ್ಕೆ ಯಾವುದೇ ಹಣವನ್ನು ಪಾವತಿ ಮಾಡಲು ಬಾಕಿ ಇರುವುದಿಲ್ಲ. ಈ ರೀತಿ ಸಮಾಪನಾ ಸಂಘದ ಆಸ್ತಿ ಮತ್ತು ಜವಾಬ್ದಾರಿಯನ್ನು ವಿಲೇವಾರಿ ಮಾಡಿರುವುದು ಸೂಕ್ತವಾಗಿರುವುದರಿಂದ ಹಾಗೂ ಸಂಘವನ್ನು ಮುಂದುವರಿಸಿಕೊಂಡು ಹೋಗುವುದರಿಂದ ಯಾವುದೇ ಪ್ರಯೋಜನ ಇಲ್ಲದಿರುವುದರಿಂದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ ಇವರ ಶಿಫಾರಸ್ಸಿನ ಅನ್ವಯ ಪರಿಗಣಿಸಿ ಈ ಸಂಘದ ನೋಂದಣಿಯನ್ನು ರದ್ದುಪಡಿಸಲು ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: ಡಿಆರ್‌ಕೆ:ಎಲ್‌ಕ್ಯೂಡಿ:26/1998-99, ದಿನಾಂಕ: 24ನೇ ಫೆಬ್ರವರಿ 2004**

ಪೀಠಿಕೆಯಲ್ಲಿ ತಿಳಿಸಿರುವ ಕಾರಣಗಳಿಗಾಗಿ ಗೌರಿಬಿದನೂರು ಬಾಪೂಜಿ ಅವಲಕ್ಕಿ ಮತ್ತು ಹುರಿಗಡಲೆ ತಯಾರಿಸುವವರ ಸಹಕಾರ ಸಂಘ ನಿಯಮಿತ, ಗೌರಿಬಿದನೂರು ಈ ಸಂಘದ ನೋಂದಣಿ ಸಂಖ್ಯೆ: 12, ದಿನಾಂಕ: 12.6.1972 ಅನ್ನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ಕಲಂ 75 ರಂತೆ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎಂ: 2001, ದಿನಾಂಕ: 21.11.2001 ರ ಅನ್ವಯ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಶ್ರೀ ಬಿ.ಸಿ. ಸತೀಶ್, ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಆದ ನಾನು ರದ್ದುಪಡಿಸಿ ಆದೇಶಿಸಲಾಗಿದೆ. ಹಾಗೂ ಸಮಾಪನಾ ಅಧಿಕಾರಿಗಳು, ಸಂಘದ ಸಂಬಂಧಿಸಿದ ದಾಖಲಾತಿಗಳನ್ನು 30 ದಿನಗಳೊಳಗೆ ಈ ಕಛೇರಿಗೆ ಸಲ್ಲಿಸುವಂತೆ ಆದೇಶವನ್ನು ಮಾಡಲಾಗಿರುತ್ತದೆ.

ಈ ಆದೇಶವನ್ನು ಈ ದಿನ ಅಂದರೆ ದಿನಾಂಕ: 24.2.2004 ರಂದು ನನ್ನ ಸಹಿ ಹಾಗೂ ಈ ಕಛೇರಿಯ ಮೊಹರಿನೊಂದಿಗೆ ಹೊರಡಿಸಿದೆ.

ಪಿ.ಆರ್. 616 ಸಹಕಾರ ಸಂಘಗಳ ಉಪ ನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ.

**ಸಹಕಾರ ಸಂಘಗಳ ಉಪನಿಬಂಧಕರ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ**

**ವಿಷಯ:** ಚಿಂತಾಮಣಿ ತಾಲ್ಲೂಕು ಕರಡಿಗುಟ್ಟ ವೃಕ್ಷ ಬೆಳೆಗಾರರ ಸಹಕಾರ ಸಂಘ (ನಿ), ಚಿಂತಾಮಣಿ ಇದರ ನೋಂದಣಿಯನ್ನು ರದ್ದುಪಡಿಸುವ ಬಗ್ಗೆ.

**ಉಲ್ಲೇಖ:** 1) ಈ ಕಛೇರಿಯ ಆದೇಶ ಸಂಖ್ಯೆ: ಡಿಆರ್‌ಕೆ:ಎಲ್‌ಕ್ಯೂಡಿ:30: 1999-2000, ದಿನಾಂಕ: 23.10.1999.
2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ ಇವರ ಪತ್ರ ಸಂಖ್ಯೆ: ಸನಿ:48:ಸಮಾಪನೆ:12:2003-04, ದಿನಾಂಕ: 20.1.2004.

**ಪೀಠಿಕೆ:**

ಚಿಂತಾಮಣಿ ತಾಲ್ಲೂಕು ಕರಡಿಗುಟ್ಟ ವೃಕ್ಷ ಬೆಳೆಗಾರರ ಸಹಕಾರ ಸಂಘ (ನಿ), ಚಿಂತಾಮಣಿ ತಾಲ್ಲೂಕು. ಈ ಸಂಘವು ಕಾರ್ಯನಿರ್ವಹಿಸದೇ ಸ್ಥಗಿತಗೊಂಡಿದ್ದರಿಂದ ಈ ಕಛೇರಿಯ ಉಲ್ಲೇಖ (1)ರ ಆದೇಶದಲ್ಲಿ ಸಂಘವನ್ನು ಋಣ ಸಮಾಪನೆಗೊಳಿಸಿ ಶ್ರೀ ಆರ್. ಚಿನ್ನಸ್ವಾಮಿರಾಜು, ಸಹಕಾರ ಅಭಿವೃದ್ಧಿ ಅಧಿಕಾರಿ, ಚಿಂತಾಮಣಿ, (ಪ್ರಭಾರ) ಇವರನ್ನು ಸಂಘದ ಸಮಾಪನಾ ಅಧಿಕಾರಿಯಾಗಿ ನೇಮಿಸಲಾಗಿತ್ತು. ಸಂಘದ ಸಮಾಪನಾ ಅಧಿಕಾರಿಗಳು, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ ಇವರಿಗೆ ನೋಂದಣಿಯನ್ನು ರದ್ದುಪಡಿಸಲು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಉಲ್ಲೇಖ (2) ರ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ ಇವರು ಸಂಘದ ನೋಂದಣಿಯನ್ನು ರದ್ದುಪಡಿಸುವಂತೆ ಕೋರಿ ಈ ಕಛೇರಿಗೆ ಪ್ರಸ್ತಾವನೆಯನ್ನು ಸಲ್ಲಿಸಿ ಶಿಫಾರಸ್ಸು ಮಾಡಿರುತ್ತಾರೆ. ಸಮಾಪನಾ ಅಧಿಕಾರಿಗಳು, ಶೂನ್ಯ ಆಸ್ತಿ ಜವಾಬ್ದಾರಿ ತಃಖ್ತೆಯನ್ನು ಸಲ್ಲಿಸಿರುತ್ತಾರೆ.

ಸಂಘದಿಂದ ಸರ್ಕಾರಕ್ಕೆ ಯಾವುದೇ ಹಣವನ್ನು ಪಾವತಿ ಮಾಡಲು ಬಾಕಿ ಇರುವುದಿಲ್ಲ. ಈ ರೀತಿ ಸಮಾಪನಾ ಸಂಘದ ಆಸ್ತಿ ಮತ್ತು ಜವಾಬ್ದಾರಿಯನ್ನು ವಿಲೇವಾರಿ ಮಾಡಿರುವುದು ಸೂಕ್ತವಾಗಿರುವುದರಿಂದ ಹಾಗೂ ಸಂಘವನ್ನು ಮುಂದುವರಿಸಿಕೊಂಡು ಹೋಗುವುದರಿಂದ ಯಾವುದೇ ಪ್ರಯೋಜನ ಇಲ್ಲದಿರುವುದರಿಂದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ ಇವರ ಶಿಫಾರಸ್ಸಿನ ಅನ್ವಯ ಪರಿಗಣಿಸಿ ಈ ಸಂಘದ ನೋಂದಣಿಯನ್ನು ರದ್ದುಪಡಿಸಲು ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: ಡಿಆರ್‌ಕೆ:ಎಲ್‌ಕ್ಯೂಡಿ:30/1999-2000, ದಿನಾಂಕ: 24ನೇ ಫೆಬ್ರವರಿ 2004**

ಪೀಠಿಕೆಯಲ್ಲಿ ತಿಳಿಸಿರುವ ಕಾರಣಗಳಿಗಾಗಿ ಚಿಂತಾಮಣಿ ತಾಲ್ಲೂಕು ಕರಡಿಗುಟ್ಟ ವೃಕ್ಷ ಬೆಳೆಗಾರರ ಸಹಕಾರ ಸಂಘ (ನಿ) ಚಿಂತಾಮಣಿ ತಾಲ್ಲೂಕು, ಈ ಸಂಘದ ನೋಂದಣಿ ಸಂಖ್ಯೆ: ಎಆರ್:48:18184:1993-94, ದಿನಾಂಕ: 30.4.1993 ಅನ್ನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ಕಲಂ 75 ರಂತೆ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎಂ: 2001, ದಿನಾಂಕ: 21.11.2001 ರ ಅನ್ವಯ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಶ್ರೀ ಬಿ.ಸಿ. ಸತೀಶ್, ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಆದ ನಾನು ರದ್ದುಪಡಿಸಿ ಆದೇಶಿಸಲಾಗಿದೆ. ಹಾಗೂ ಸಮಾಪನಾ ಅಧಿಕಾರಿಗಳು, ಸಂಘದ ಸಂಬಂಧಿಸಿದ ದಾಖಲಾತಿಗಳನ್ನು 30 ದಿನಗಳೊಳಗೆ ಈ ಕಛೇರಿಗೆ ಸಲ್ಲಿಸುವಂತೆ ಆದೇಶವನ್ನು ಮಾಡಲಾಗಿರುತ್ತದೆ.

ಈ ಆದೇಶವನ್ನು ಈ ದಿನ ಅಂದರೆ ದಿನಾಂಕ: 24.2.2004 ರಂದು ನನ್ನ ಸಹಿ ಹಾಗೂ ಈ ಕಛೇರಿಯ ಮೊಹರಿನೊಂದಿಗೆ ಹೊರಡಿಸಿದೆ.

ಪಿ.ಆರ್. 617 ಸಹಕಾರ ಸಂಘಗಳ ಉಪ ನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ.

**THE KARNATAKA AYURVEDIC AND UNANI PRACTITIONERS BOARD,**
**DHANVANTRI ROAD, BANGALORE - 560 009**
**NOTIFICATION**
**No. Aub/Reg/15/2003-04 Dated: 20th Feb 2004**

The Names and Qualification of all the Practitioners entered in the Register from 1st January 2003 to 31st January 2004 under Ayurveda, Unani, Integrated Siddha, Naturopathy and Yoga Systems of Medicine are published under Section – 29 of the Karnataka Ayurvedic and Unani Practitioners Act 1961 as per the list appended to this Notification for information of the Practitioners.

This List is in addition to and in continuation of the List of names and qualification of Practitioners already published in the Official Gazette date: 16.01.1986, 03.07.1986, 03.12.1987, 02.03.1989, 05.07.1993, 06.09.1994, 29.01.1996, 15.11.1996, 19.02.1997, 01.01.1998, 25.05.1999, 03.07.2000, 27.08.2002 and 06.03.2004.

These Nineteenth lists together shall be deemed to be list of all Practitioners entered in the Register as on 31st January 2004.

DR. A. HANUME GOWDA
REGISTRAR
KARNATAKA AYURVEDIC AND UNANI PRACTITIONERS
BOARD DHANVANTRI ROAD, BANGALORE.

**AYURVEDA**
**A**

| Reg. No. | Name In Full | Qualifi-cation | Reg. No. | Name In Full | Qualifi-cation |
|---|---|---|---|---|---|
| 14853 | Dr. Akkamahadevi.S.Hiremath. | B.A.M.S | 15094 | Dr. Abdul Khader. | B.A.M.S |
| 14860 | Dr. Arathi. S | B.A.M.S | 15102 | Dr. Abhijith. H.N | B.A.M.S |
| 14884 | Dr. Aursang Laxman Govindappa. | B.A.M.S | 15103 | Dr. Arunkumar. A.S | B.A.M.S |
| 14901 | Dr. Aralalemath Siddalingswamy. | B.A.M.S | 15111 | Dr. Amulya. R.H | B.A.M.S |
| 14932 | Dr. Arun Kumar Devaraju. S.R | B.A.M.S | 15132 | Dr. Anita Ekbote. | B.A.M.S |
| 14941 | Dr. Anitha. H.P | B.A.M.S | 15133 | Dr. Anuradha.B.Nageshrao. | B.A.M.S |
| 14960 | Dr. Anuradha. H.M | B.A.M.S | 15157 | Dr. Ajay Singh. | B.A.M.S |
| 14965 | Dr. Annapurna Hawaldarmath. | B.A.M.S | 15168 | Dr. Anupama. M.L | B.A.M.S |
| 14981 | Dr. Archana. C.P | B.A.M.S | 15182 | Dr. Anil Kumar. P.B | B.A.M.S |
| 15011 | Dr. Ananth Narayan. R | B.A.M.S | 15186 | Dr. Asha. B.R | B.A.M.S |
| 15026 | Dr. Asha.M.Waddatti. | B.A.M.S | 15212 | Dr. Ambika Sony. | B.A.M.S |
| 15028 | Dr. Ashwini. A | B.A.M.S | 15213 | Dr. Arun Kumar. T.N | B.A.M.S |
| 15029 | Dr. Asha. H.C | B.A.M.S | 15228 | Dr. Amarnath. H.K | B.A.M.S |
| 15053 | Dr. Anikumar Dagidar. | B.A.M.S | 15230 | Dr. Ambili. K | B.A.M.S |
| 15054 | Dr. Anand.A.Athane. | B.A.M.S | 15231 | Dr. Anuroopa. H.K | B.A.M.S |
| 15059 | Dr. Anuradha. S.S | B.A.M.S | 15243 | Dr. Ashwini.M.Alva. | B.A.M.S |
| 15060 | Dr. Ashok Patil. | B.A.M.S | 15247 | Dr. Asiya Khanum. | B.A.M.S |
| 15061 | Dr. Anusha. V | B.A.M.S | 15254 | Dr. Archana. K | B.A.M.S |
| 15073 | Dr. Ashokan. V | B.A.M.S | 15276 | Dr. Anita.J.Pillai | B.A.M.S |
| 15086 | Dr. Archana.M.Pai. | B.A.M.S | 15287 | Dr. Anil Kumar. H | B.A.M.S |
| 15297 | Dr. Ashwini Joshi. | B.A.M.S | 15596 | Dr. Amatya Gouda Kadagouda Patil. | B.A.M.S |
| 15300 | Dr. Anita Yadav. | B.A.M.S | 15597 | Dr. Arunkumar Malagar. | B.A.M.S |
| 15302 | Dr. Asha. H.N | B.A.M.S | 15611 | Dr. Akshatha. K | B.A.M.S |
| 15322 | Dr. Amareshwar Puranikmath. | B.A.M.S | 15638 | Dr. Anupama. | B.A.M.S |
| 15324 | Dr. Anita Halagatti | B.A.M.S | 15650 | Dr. Ashmitha. C | B.A.M.S |
| 15331 | Dr. Atiya Shabreen. | B.A.M.S | 15656 | Dr. Asha Shri. | B.A.M.S |
| 15371 | Dr. Asha.S.Gadavi. | B.A.M.S | 15662 | Dr. Anand Kulkarni. | B.A.M.S |

| Reg. No. | Name In Full | Qualifi-cation | Reg. No. | Name In Full | Qualifi-cation |
|---|---|---|---|---|---|
| 15379 | Dr. Anil Kumar Garidi. | B.A.M.S | 15675 | Dr. Anand.Y.Galagali. | B.A.M.S |
| 15410 | Dr. Anitha. A.S | B.A.M.S | 15691 | Dr. Archana Kamath. | B.A.M.S |
| 15420 | Dr. Arati Kulkarni. | B.A.M.S | 15713 | Dr. Achala.K.Pujari. | B.A.M.S |
| 15436 | Dr. Aravind Kumar | B.A.M.S | 15719 | Dr. Abinetri Hegde. | B.A.M.S |
| 15447 | Dr. Aravind Gothe. | B.A.M.S | 15723 | Dr. Archana.V.Panchaxarimath. | B.A.M.S |
| 15455 | Dr. Abdul Gufar. | B.A.M.S | 15728 | Dr. Ajitha Narayana. K.S | B.A.M.S |
| 15464 | Dr. Asha. L.M | B.A.M.S | 15750 | Dr. Aruna Hanamant Mali. | B.A.M.S |
| 15483 | Dr. Aruna. K.M | B.A.M.S | 15754 | Dr. Anande. R.S | B.A.M.S |
| 15492 | Dr. Arati.R.Hidaduggi. | B.A.M.S | 15758 | Dr. Archana More. | B.A.M.S |
| 15499 | Dr. Alamma. H | B.A.M.S | 15785 | Dr. Ashok. M.G | B.A.M.S |
| 15506 | Dr. Abeed Hussain. M.k | B.A.M.S | 15797 | Dr. Anita. | B.A.M.S |
| 15516 | Dr. Aparna Das. | B.A.M.S | 15801 | Dr. Archana Naik. V | B.A.M.S |
| 15523 | Dr. Archana Waghmare. | B.A.M.S | 15818 | Dr. Annapoorna. K | B.A.M.S |
| 15527 | Dr. Ananda Gouda. K | B.A.M.S | 15838 | Dr. Aravind. M.C | B.A.M.S |
| 15532 | Dr. Alka Yadav. K.M | B.A.M.S | 15847 | Dr. Appannagouda Metipatil. | B.A.M.S |
| 15556 | Dr. Anitha. | B.A.M.S | 15862 | Dr. Ashwin Kumar. K.G | B.A.M.S |
| 15584 | Dr. Apardh. A.A | B.A.M.S | 15877 | Dr. Asha. H.S | B.A.M.S |
| 15585 | Dr. Arun Vir Singh. | | | | |
| | | | **B** | | |
| 14837 | Dr. Bhagyalakshmi.K. Uttarkar. | B.A.M.S | 15266 | Dr. Basavaraddi Venkaraddiyavar. | B.A.M.S |
| 14841 | Dr. Balachandra Krishnappa Pagalinayak. | B.A.M.S | 15279 | Dr. Bakkannavar. S.A | B.A.M.S |
| 14847 | Dr. Bajantri Shivappa Bhimappa | B.A.M.S | 15381 | Dr. Bhanu. H.C | B.A.M.S |
| 14886 | Dr. Bharamannanavar Shivakumar Somappa | B.A.M.S | 15382 | Dr. Basavaraj Tirakannavar. | B.A.M.S |
| 14888 | Dr. Biradar Anita Angadrao. | B.A.M.S | 15424 | Dr. Bharati Sangam. | B.A.M.S |
| 14889 | Dr. Birajdar Shrirang Zeeting Rao. | B.A.M.S | 15432 | Dr. Bhagyalakshmi. | B.A.M.S |
| 14893 | Dr. Biradar Mallanagouda Bheemanagouda. | B.A.M.S | 15442 | Dr. Babitha. E | B.A.M.S |
| 14908 | Dr. Badapagol Sanjay Yamanappa. | B.A.M.S | 15458 | Dr. Basavaraja.S.Mattur. | B.A.M.S |
| 14909 | Dr. Badagandi Iranna Basappa. | B.A.M.S | 15477 | Dr. Bachare Vilas Hanumant. | B.A.M.S |
| 14922 | Dr. Bhagyavati. | B.A.M.S | 15517 | Dr. Bharathi Kumbhar. | B.A.M.S |
| 14956 | Dr. Bentur Guruprasad. A | B.A.M.S | 15561 | Dr. Basarigidad. J.P | B.A.M.S |
| 14969 | Dr. Basamma Thabbannawar. | B.A.M.S | 15679 | Dr. Bheemarsen Deshapande. | B.A.M.S |
| 14977 | Dr. Binu.C.Nair. | B.A.M.S | 15687 | Dr. Bhavani. K | B.A.M.S |
| 15120 | Dr. Basavaraj Matti Koppa. | B.A.M.S | 15690 | Dr. Bibi Catherine Antony. | B.A.M.S |
| 15123 | Dr. Boragave. A.M | B.A.M.S | 15741 | Dr. Biradar Nandana. | B.A.M.S |
| 15156 | Dr. Basavaraj Revanappa Kori. | B.A.M.S | 15746 | Dr. Bhagya Fernandes. | B.A.M.S |
| 15161 | Dr. Basarajeshwari Shirur. | B.A.M.S | 15764 | Dr. Bannikoppa. Z.M | B.A.M.S |
| 15193 | Dr. Brijesh. K | B.A.M.S | 15767 | Dr. Beena. M.D | B.A.M.S |
| 15198 | Dr. Bharati. G.V | B.A.M.S | 15769 | Dr. Babitha Priyadarshini Rai. | B.A.M.S |
| 15046 | Dr. Banakar Rekha. | B.A.M.S | 15884 | Dr. Basavaraj Muragund. | B.A.M.S |
| 15202 | Dr. Bhuvaneshwari. | B.A.M.S | 15898 | Dr. Bhindhushree. C | B.A.M.S |
| 15221 | Dr. Bagare. D.M | B.A.M.S | 15917 | Dr. Bagewadi Shantinath Subhashchandra. | B.A.M.S |

| Reg. No. | Name In Full | Qualifi-cation | Reg. No. | Name In Full | Qualifi-cation |
|---|---|---|---|---|---|
| 15261 | Dr. Bhanuprakash. S.M | B.A.M.S | | | |
| | | | C | | |
| 14843 | Dr. Chalawade Balu Shivappa. | B.A.M.S | 15319 | Dr. Chandra Prabha. R.P | B.A.M.S |
| 14856 | Dr. Chandranath Singh. | B.A.M.S | 15320 | Dr. Chandrashekarayya Salimath. | B.A.M.S |
| 14911 | Dr. Channabasavanna Bhimashankar. | B.A.M.S | 15327 | Dr. Chandrakala. N | B.A.M.S |
| 14972 | Dr. Chaithanya. B | B.A.M.S | 15338 | Dr. Chandana. V | B.A.M.S |
| 14976 | Dr. Chetana.G.Kudari. | B.A.M.S | 15347 | Dr. Chaya. D.V | B.A.M.S |
| 15093 | Dr. Chhayadevi Janadri. | B.A.M.S | 15399 | Dr. Chougule Nitin. N | B.A.M.S |
| 15098 | Dr. Chethan Babu. S | B.A.M.S | 15444 | Dr. Chetana. M | B.A.M.S |
| 15189 | Dr. Chaitra Bhat. | B.A.M.S | 15445 | Dr. Champa. S | B.A.M.S |
| 15196 | Dr. Chougale Prashant. A | B.A.M.S | 15514 | Dr. Chandrakanth. M | B.A.M.S |
| 15206 | Dr. Chandrakala. B.S | B.A.M.S | 15621 | Dr. Chaitra.K.Shetty. | B.A.M.S |
| 15253 | Dr. Chandramouli. C | B.A.M.S | 15677 | Dr. Chandrakala. T | B.A.M.S |
| 15262 | Dr. Chethan Kumar. V.K | B.A.M.S | 15678 | Dr. Chougule. A.M | B.A.M.S |
| 15263 | Dr. Cini. S | B.A.M.S | 15843 | Dr. Chethana. P | B.A.M.S |
| 15277 | Dr. Chougule. P.R | B.A.M.S | 15879 | Dr. Chaitaxi Masudi. | B.A.M.S |
| 15306 | Dr. Chetan. M | B.A.M.S | 15906 | Dr. Chinnama Devi Reddy. M | B.A.M.S |
| 15317 | Dr. Chandralekha. A | B.A.M.S | | | |
| | | | D | | |
| 14844 | Dr. Dashavant Kusuma Chandrashekar. | B.A.M.S | 15325 | Dr. Deepthi. G.D | B.A.M.S |
| 14898 | Dr. Deepti Kiran Londhe. | B.A.M.S | 15481 | Dr. Deshpande Deepa Vinayak. | B.A.M.S |
| 14963 | Dr. Dhulappa. | B.A.M.S | 15497 | Dr. Drakshyam.N.Benni. | B.A.M.S |
| 14985 | Dr. Deleep Kumar. M | B.A.M.S | 15545 | Dr. Divya. B.V | B.A.M.S |
| 15018 | Dr. Diggavi Guru Prasanna. | B.A.M.S | 15557 | Dr. Daranendra. M | B.A.M.S |
| 15024 | Dr. Durdana Begum. | B.A.M.S | 15562 | Dr. Dongree. D.B | B.A.M.S |
| 15040 | Dr. Deepashree. R | B.A.M.S | 15569 | Dr. Dyamanagouda Patil. | B.A.M.S |
| 15117 | Dr. Dileep Kumar. T.V | B.A.M.S | 15613 | Dr. Doddabasayya Sangayya Swami. | B.A.M.S |
| 15207 | Dr. Deepa. P.M | B.A.M.S | 15657 | Dr. Dasohamath. C.S | B.A.M.S |
| 15220 | Dr. Debabrata Das. | B.A.M.S | 15684 | Dr. Deshmane Sandeep Shrirang. | B.A.M.S |
| 15236 | Dr. Dharani. | B.A.M.S | 15685 | Dr. Doddamani. B.S | B.A.M.S |
| 15240 | Dr. Deepa. V.D | B.A.M.S | 15697 | Dr. Deshpande Gurunath Urf Praveen. | B.A.M.S |
| 15246 | Dr. Deepthi. V.S | B.A.M.S | 15779 | Dr. Divyashree. A.S | B.A.M.S |
| 15318 | Dr. Devi.S.Raj. | B.A.M.S | 15780 | Dr. Deepalatha.U.Rao. | B.A.M.S |
| 15451 | Dr. Devi Prasad.K.S.Shetty. | B.A.M.S | 15806 | Dr. Deepa. K | B.A.M.S |
| | | | 15815 | Dr. Deginal Bharatidevi Basavaraj. | B.A.M.S |
| | | | 15849 | Dr. Deepa.C.Patil. | B.A.M.S |
| | | | E | | |
| 15683 | Dr. Ehadur Rehman. | B.A.M.S | | | |
| | | | F | | |
| 15334 | Dr. Fakkirappa Kammar. | B.A.M.S | 15614 | Dr. Fernandes Jasmine. | B.A.M.S |
| 15390 | Dr. Fareeda Begaum Shaikh. | | | | |

